# ದೈವಸಾಕ್ಷಾತ್ಕಾರ ಎಲ್ಲರ ಆಜನ್ಮ ಸಿದ್ಧಹಕ್ಕು

ಡಾ॥ ಎಸ್.ಆರ್. ಸಿದ್ಧಲಿಂಗಪ್ಪ

ಇಷ್ಟಲಿಂಗ ಧರ್ಮದ ನೆಲೆಯ
ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥ ಹಾಗೂ
ಬಸವಾದಿ ಶರಣರ ವಚನ ವಾಙ್ಮಯದಲ್ಲಿನ
ಲಿಂಗಾಂಗ ಸಾಮರಸ್ಯ ವಿದ್ಯೆ

ಏಕ ವಿಷಯ ಪ್ರಬಂಧ

**A Monograph**
**2009 Nov.**

**Institute of Veerashaiva and Contemporary Studies,**
**Bangalore-72.**

**Address: and Designation of to Author**

**Designation: Dr. S.R. Siddalingappa**
**B.E. (elec) Mys, win M.tech (Aero) IIT Kanpur,**
**Ph:D (Acro) Ph.D (Miric) Uni, of London,**

**Senior Scientist, N.A.L.**
**Rtd. Deputy Director, NAS.**
**Bangalore,**
**Founder: Institute of Veerashaiva**
**and Contemporary Studies,**
**Bangalore-72.**

**Postal Address : No.90, 2nd Main Road,**
**Coconut Gardens,**
**Nagarabhavi,**
**Bangalore-560 072.**
**Mob: 9880249673,**

## “ಇಷ್ಟಲಿಂಗ ಧರ್ಮದ” ನೆಲೆಯ
## ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥ ಹಾಗು ಬಸವಾದಿ ಶರಣರ
## ವಚನ ವಾಙ್ಮಯದಲ್ಲಿರುವ
## “ಲಿಂಗಾಂಗ ಸಾಮರಸ್ಯ ವಿದ್ಯೆ”

ಅನುಕ್ರಮಣಿ

**ಈ ಪ್ರಬಂಧದಲ್ಲಿ ವಿವಹರಿಸಿರುವ**

**ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿನ**

**ಶ್ಲೋಕಗಳು**

| | ಶ್ಲೋಕಗಳು | ಪುಟ |
|---|---|---|
| 1. | (5–31) | 17 |
| 2. | (5–52) | 19 |
| 3, 4 | (1–25), (1–26) | 31 |
| | (1–21) ರಿಂದ (1–31) | 54–55 |
| | (4–46) ರಿಂದ (4–54) | 57–59 |
| | (5–1) ರಿಂದ (5–18) | 59–63 |
| | (5–19) ರಿಂದ (5–24) | 65–67 |
| | (6–22) (6–23, 24) (6–25) (6–26) (6–29) (6–30) (6–31) | 131 |
| | (6–32) (6–33) (6–34) (6–35) (6–36) (6–37) | 136 |
| | (6–38) (6–42) (6–48) (6–49) | 137 |
| | (6–50) (6–51) (6–54) (6–59) (6–60) | 139 |
| | (6–61) (6–62) (8–3) (8–4) | 141 |
| | (8–5) (8–6) (8–7) (8–8) (8–9) (8–10) | 143 |
| | (8–11) (8–16) (8–17) (8–18) (8–19) (8–20) (8–21) (8–22) (8–41) (8–48) | 145 |

<u>ಪ್ರಬಂಧದಲ್ಲಿನ</u>

<u>ಬಸವಾದಿ ಶರಣರ ವಚನಗಳು</u>

## "A Monographi"
### ಏಕ ವಿಷಯ ಪ್ರಬಂಧ
### "ಇಷ್ಟಲಿಂಗ ಧರ್ಮದ "ನೆಲೆಯ
### ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥ ಹಾಗೂ ಬಸವಾದಿ
### "ಲಿಂಗಾಂಗ ಸಾಮರಸ್ಯ ವಿದ್ಯೆ"

ಲೇಖಕರು : ಡಾ.॥ ಎಸ್. ಆರ್. ಸಿದ್ಧಲಿಂಗಪ್ಪ
ಹಿರಿಯ ವಿಜ್ಞಾನಿಗಳು ಎನ್.ಎ.ಎಲ್.
ಡೆಪ್ಯೂಟಿ ಡೈರೆಕ್ಟರ್ (ನಿವೃತ್ತ)
ಸಂಸ್ಥಾಪಕರು: **Institute of Veerashaiva and Contemporary Studies, Bangalore-72.**
**Mob: 988024963**

1. ಪ್ರಸ್ತಾವನೆ :

'ಶ್ರೀ ಸಿದ್ಧಾಂತ ಶಿಖಾಮಣಿ' ಶಾಸ್ತ್ರ ಗ್ರಂಥ ಹಾಗೂ ಬಸವಾದಿ ಶರಣರ ವಚನ ವಾಙ್ಮಯ ಇವೆರಡೂ ಸಹ "ವೀರಶೈವ ಧರ್ಮದ" ಸಂಬಂಧಿತವಾದ "ಆಧಾರಗ್ರಂಥ"ಗಳಾಗಿವೆ. ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವು "ಶಾಸ್ತ್ರ" **(theory)** ಸ್ವರೂಪದ ಗ್ರಂಥವಾದರೆ, ಬಸವಾದಿ ಶರಣರ ವಚನ ವಾಙ್ಮಯವು 'ಅನುಭವ' **(Practicals)** ಸ್ವರೂಪದ ವಾಙ್ಮಯವಾಗಿದೆ. ಮೂಲಭೂತವಾಗಿ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವು ಸಂಸ್ಕೃತ ಭಾಷೆಯಲ್ಲಿ ವಿರಚಿತವಾಗಿದ್ದು; (ಸೃಜಿಸಿದ್ದು); ಆ ಗ್ರಂಥದಲ್ಲಿ ಒಟ್ಟು 21 ಪರಿಚ್ಛೇದಗಳಿದ್ದು, ಆ ಪರಿಚ್ಛೇದಗಳಲ್ಲಿ ಒಟ್ಟು : 1,397 ಅನುಷ್ಟಪ ಛಂದಸ್ಸಿನ ಸ್ವರೂಪದ ಶ್ಲೋಕಗಳೂ ಹಾಗೂ ಅನೇಕ ವೃತ್ತಗಳಿಂದ ಕೂಡಿದ ಗ್ರಂಥವಾಗಿದೆ. ಈ ಗ್ರಂಥವನ್ನು ಮೂಲತಃ ಸಂಸ್ಕೃತ ಭಾಷೆಯಲ್ಲಿ, ಶ್ರೀ ಶಿವಯೋಗಿ ಶಿವಾಚಾರ್ಯರು ವಿರಚಿಸಿದ್ದಾರೆ. ಬಸವಾದಿ ಶರಣದ ವಚನ ವಾಙ್ಮಯವು ಮೂಲತಃ ಕನ್ನಡ ಭಾಷೆಯಲ್ಲಿ ರಚಿತವಾಗಿದ್ದು, ಬಸವಾದಿ ಶರಣರನ್ನೊಳಗೊಂಡಂತೆ ಅನೇಕ ಶರಣ ಶರಣೆಯರು ರಚಿಸಿರುವ 'ವಚನ'ಗಳಿಂದ ಕೂಡಿದ ವಾಙ್ಮಯವಾಗಿದೆ. ಆದರೂ ಸಹ ಈ ವಚನ ವಾಙ್ಮಯವನ್ನು ಬಸವ ಪೂರ್ವಯುಗ, ಬಸವಯುಗ; ಹಾಗೂ ಬಸವೋತ್ತರ ಯುಗದ ವಚನವಾಙ್ಮಯವನ್ನು ಗ್ರಹಿಸಿ, ಎಲ್ಲವನ್ನೂ ಒಟ್ಟಾರೆ ಬಸವಾದಿ ಶರಣರ 'ವಚನ ವಾಙ್ಮಯ'ವೆಂದು ಕರೆಯಲಾಗಿದೆ. ಈ ಒಟ್ಟು ವಾಙ್ಮಯವು ಸುಮಾರು "25,000" ವಚನಗಳು ಕರ್ನಾಟಕ ಸರ್ಕಾರ ಪ್ರಕಟಿಸಿರುವ (1993, ಮತ್ತು 2000) ಸಮಗ್ರ ವಚನ ಸಂಪುಟ (15 ಸಂಪುಟಗಳಲ್ಲಿ) ಗಳಲ್ಲಿ ದೊರಕುತ್ತಿದೆ. ಇಲ್ಲಿ ಈ ಪ್ರಬಂಧದ ಸಲುವಾಗಿ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದ 1397 ಸಂಸ್ಕೃತ ಶ್ಲೋಕಗಳನ್ನು ವಾಚ್ಯಾರ್ಥ **(vibrations)** ಗಳಾಗಿ ಕನ್ನಡ ಭಾಷೆಯಲ್ಲಿ ಗ್ರಹಿಸಿ; 'ಅರ್ಥೈಸಿ' 'ಶಾಸ್ತ್ರ'ವನ್ನು ತಿಳಿಯಲಾಗಿದೆ. ಈ 'ಶಾಸ್ತ್ರದ ಅರ್ಥೈಸುವಿಕೆ' ಗಳಿಗೆ 'ಅನುಭಾವ ಸ್ವರೂಪ'ದ ವಚನ ವಾಙ್ಮಯದಿಂದ ಅನುಭಾವಗಳನ್ನು ಹೊಂದಿಸಿ, ಪರಸ್ಪರ ಪೂರಕವಾಗಿ **(Theory and Practicals)** ಅಧ್ಯಯನ ಮಾಡಿ; ಈ ಪ್ರಬಂಧವನ್ನು ರಚಿಸಲಾಗಿದೆ. <u>ಕಾರಣ ಈ ಪ್ರಬಂಧದ ಓದಿನಿಂದ ಓದುಗರು ತಮ್ಮ ದೇಹದಲ್ಲೇ 'ದೈವ ಸಾಕ್ಷಾತ್ಕಾರ' ಮಾಡಿಕೊಳ್ಳುವ ಕ್ರಮಗಳನ್ನು ತಿಳಿದು, ಅದೇ ರೀತಿಯಲ್ಲಿ ಆ ವಿಚಾರಗಳ ಅನುಷ್ಠಾನ</u>

ಮಾಡಿ ತಾವೂ ಸಹ ದೈವ ಸಾಕ್ಷಾತ್ಕಾರಗಳನ್ನು ಪಡೆಯಬಹುದಾಗಿದೆ. ಇಲ್ಲಿ ನಿರೂಪಿಸಿರುವ ವಿಚಾರಗಳು ವಸ್ತು ನಿಷ್ಠವಾಗಿ ಆಧಾರಗಳಿಂದ ಕೂಡಿದ್ದರೂ ಸಹ, ಓದುಗರು ತಮ್ಮ ತಮ್ಮಲ್ಲಿ ಈ ವಿಚಾರಗಳನ್ನು ಜಿಜ್ಞಾಸಾ ಸ್ವರೂಪದ ಚರ್ಚೆಗಳನ್ನು ಮಾಡಿ, ವಿಚಾರಗಳನ್ನು ಖಚಿತಪಡಿಸಿಕೊಂಡು, ತಮ್ಮ ತಮ್ಮ ಅನುಷ್ಠಾನಗಳಲ್ಲಿ ತೊಡಗಿಸಿಕೊಳ್ಳಬೇಕು. ಇಲ್ಲಿ ಪ್ರಮುಖವಾಗಿ 'ದೈವ'ವೆಂದರೆ 'ಲಿಂಗತತ್ತ್ವ'ವಾಗಿದೆ. 'ಲಿಂಗ ತತ್ತ್ವ'ವನ್ನು ಕೇವಲ 'ಲಿಂಗ'ವೆಂದೂ ಸಹ ಕರೆಯಲಾಗಿದೆ. ಈ 'ಲಿಂಗ ತತ್ತ್ವ'ವೆಂದರೆ 'ಶಕ್ತಿ ವಿಶಿಷ್ಟವಾದ ಚೈತನ್ಯ'ವೆಂದು ತಿಳಿಯಲಾಗಿದೆ. ಇಲ್ಲಿ ನಿರಂತರವಾಗಿ ಯಾವಾಗಲೂ, ಎಲ್ಲ ಸ್ಥಿತಿಗಳಲ್ಲೂ ಈ 'ಶಕ್ತಿಯ ವಿಶಿಷ್ಟ ಚೈತನ್ಯ'ದಲ್ಲಿ, ಶಕ್ತಿ ಮತ್ತು ಚೈತನ್ಯವನ್ನು ಬೇರ್ಪಡಿಸಲು ಸಾಧ್ಯವೇ ಇಲ್ಲ. ಕಾರಣ ಅವೆರಡೂ ಯಾವಾಗಲೂ ನಿರಂತರವಾಗಿ 'ಅವಿನಾಭಾವ' ಸಂಬಂಧದಿಂದ ಕೂಡಿಕೊಂಡೇ ಇರುತ್ತದೆ. ಇಂತಹ 'ಲಿಂಗ ತತ್ತ್ವ'ದಲ್ಲಿ ಶಕ್ತಿಯು ಅಪ್ರಕಟಿತ ಮತ್ತು ಪ್ರಕಟಿತ ಸ್ಥಿತಿಗಳಲ್ಲಿರುತ್ತದೆ. ಅಂದರೆ, ಕೇವಲ 'ಚೈತನ್ಯ' ಸ್ವರೂಪದಲ್ಲೂ; ಹಾಗೂ 'ಚೈತನ್ಯಾತ್ಮಕ ಶಕ್ತಿ' ಸ್ವರೂಪದಲ್ಲೂ ಇರುತ್ತದೆ. ಕೇವಲ 'ಚೈತನ್ಯ' ಸ್ವರೂಪದಲ್ಲಿರುವ 'ಲಿಂಗ ತತ್ತ್ವ'ವನ್ನು 'ನಿರಾಕಾರ'ವೆಂತಲೂ; 'ಚೈತನ್ಯಾತ್ಮಕ ಶಕ್ತಿ' ಸ್ವರೂಪವನ್ನು ಹೊಂದಿರುವ 'ಲಿಂಗ ತತ್ತ್ವ'ವೇ 'ಸಾಕಾರ ಲಿಂಗ ತತ್ತ್ವ'ವೇ 'ಸಾಕಾರತೆ'ಯನ್ನು ಹೊಂದಿ ಈ ಇಡೀ ಸೃಷ್ಟಿಯಾಗಿದೆ. ಹಾಗೂ ಈ ಸಾಕಾರ ಲಿಂಗ ತತ್ತ್ವದ ಭಾಗದಿಂದ; ಮಾನವನೂ ಸಹ ತನ್ನ ಅಸ್ಥಿತ್ವದಲ್ಲಿದ್ದಾನೆ. ಇಂತಹ ಯಾರೇ ಮಾನವನೂ ಸಹ ಆ ನಿರಾಕಾರ ಮತ್ತು ಸಾಕಾರ 'ಲಿಂಗ ತತ್ತ್ವ' ಸ್ವರೂಪಿಯೇ ಆಗಿರುವುದರಿಂದ, ಅವನು ತನ್ನಲ್ಲಿರುವ 'ಲಿಂಗ ತತ್ತ್ವ' ಸ್ವರೂಪವನ್ನು ತಿಳಿದು ಕಡೆಯಲ್ಲಿ ತನ್ನ ಸಾಧನೆಗಳಿಂದ ಆ 'ಲಿಂಗ ತತ್ತ್ವ' ಸ್ವರೂಪಿಯೇ ಆಗುವ ಕ್ರಮಗಳನ್ನು ತಿಳಿಸಿಕೊಡುವ ಪ್ರಯತ್ನವೇ ಈ ಪ್ರಬಂಧದ ಉದ್ದೇಶವಾಗಿದೆ. ಈ ಉದ್ದೇಶದ ಸಫಲತೆಗಾಗಿ, ವೀರಶೈವ ಧರ್ಮದ ಆಧಾರ ಸ್ವರೂಪ ಗ್ರಂಥಗಳಾದ 'ಶ್ರೀ ಸಿದ್ಧಾಂತ ಶಿಖಾಮಣಿ' ಹಾಗೂ ಬಸವಾದಿ ಶರಣ ವಚನ ವಾಙ್ಮಯಗಳನ್ನು ಉಪಯೋಗಿಸಿಕೊಂಡು ಸಾಧಕನು ತನ್ನ ದೇಹದಲ್ಲೇ ದೈವ ಸಾಕ್ಷಾತ್ಕಾರ ಮಾಡಿಕೊಳ್ಳುವ ನೆಲೆಗಳನ್ನು ಇಲ್ಲಿ ಪ್ರತಿಪಾದಿಸಲಾಗಿದೆ. ಇಲ್ಲಿ ವಿಷಯ ಪ್ರತಿಪಾದನೆಯೇ ಪ್ರಮುಖವಾಗಿದ್ದು, ಈ ವಿಚಾರ ಸಂಬಂಧಿತ 'ಚರಿತ್ರೆ ಭೂಗೋಳೆಗಳಿಗೆ ಅಸ್ಥಿತ್ವವಿರುವುದಿಲ್ಲ. ಈ ಕಾರಣ ಸಹೃದಯರು ಈ ಪ್ರಬಂಧವನ್ನು ಕೇವಲ 'ದೈವ ಸಾಕ್ಷಾತ್ಕಾರ' ನೆಲೆಗಳಲ್ಲಿ ಮಾತ್ರ ಗ್ರಹಿಸಿ, ವಿಶ್ಲೇಷಿಸಿ, ಚರ್ಚೆ ಮಾಡಿ ಜಿಜ್ಞಾಸೆಗಳಿಗೆ ಒದಗಿಸಿ ಬಂದ ನಿರ್ಣಯ ವಿಚಾರಗಳನ್ನು ತಮ್ಮ ತಮ್ಮ ಅನುಷ್ಠಾನಗಳಿಗೆ ಒದಗಿಸಿ, ದೈವಸಾಕ್ಷಾತ್ಕಾರಗಳನ್ನು ಮಾಡಿಕೊಳ್ಳಬೇಕಾಗಿದೆ. ಈ ನೆಲೆಯಲ್ಲಿಯೇ ಈ ಪ್ರಬಂಧದ ವಿಚಾರಗಳ ಪ್ರತಿಪಾದನೆ ಇದೆ. 36 ತತ್ತ್ವಗಳು :

ಸಾಧಕನು ತನ್ನ ದೇಹದಲ್ಲೇ ಇರುವ 'ಲಿಂಗತತ್ತ್ವ'ದ (ಅಖಂಡ ಚೈತನ್ಯಾತ್ಮಕ ಶಕ್ತಿಯ) ಅಸ್ಥಿತ್ವವನ್ನು ತಿಳಿಯಬೇಕಾದರೆ, ಅವನಿಗೆ '36' ತತ್ತ್ವಗಳ ಸ್ವರೂಪ ಹಾಗೂ ಅವುಗಳ ಸಂಬಂಧಿತ ಎಲ್ಲಾ ವಿಚಾರಗಳ ವಿವರಗಳು ತಿಳಿದಿರಬೇಕಾಗುತ್ತದೆ. ಕಾರಣ 'ಲಿಂಗತತ್ತ್ವ'ದ ವಿವಿಧ ಸ್ವರೂಪಗಳೇ ಈ '36' ತತ್ತ್ವಗಳಾಗಿವೆ. ಆಧ್ಯಾತ್ಮಿಕವಾಗಿ ಈ '36' ತತ್ತ್ವಗಳ ಸ್ವರೂಪಗಳ ತಿಳುವಳಿಕೆಗಳಿಗೆ ಕಾಲಾಂತರದಲ್ಲಿ ಅನೇಕ ಶತಮಾನಗಳ (ಯುಗಗಳ) ಚಿಂತನೆಗೆ ಒಳಗಾಗಿದೆ. ಈ 36 ತತ್ತ್ವಗಳ ಚಿಂತನೆಗಳು ಮೂಲಭೂತವಾಗಿ ಆಗಮ ಪ್ರಣೀತವಾಗಿದ್ದು, ಅನೇಕ ಆಗಮಾಧಾರಿತ ಧರ್ಮಗಳಿಂದ, ಕಾಶ್ಮೀರ ಶೈವ, ಶೈವ ಸಿದ್ಧಾಂತ (ತಮಿಳು ಶೈವ); ವೀರಶೈವ ಧರ್ಮಗಳಲ್ಲಿ ಪ್ರತಿಪಾದಿತವಾಗಿದೆ. ಈ 'ನಿರಾಕಾರ' ಮತ್ತು 'ಸಾಕಾರ ಲಿಂಗತತ್ತ್ವ' ಸ್ವರೂಪಗಳನ್ನು ಈ '36 ತತ್ತ್ವ'ಗಳ ಆಧಾರದಲ್ಲಿ ತಿಳಿಯಬಹುದಾಗಿದೆ. ಈ '36 ತತ್ತ್ವ'ಗಳು ಕ್ರಮವಾಗಿ ಈ ಕೆಳಗಿನಂತೆ ನಿರೂಪಿಸಬಹುದಾಗಿದೆ.

(1) ಶಿವ (2) ಶಕ್ತಿ (3) ಸದಾಶಿವ (4) ಈಶ್ವರ (5) ಶುದ್ಧ ವಿದ್ಯಾ (6) ಮಾಯಾ (7) ಕಾಲ (8) ಕಲಾ (9) ರಾಗ (10) ಅವಿದ್ಯಾ (11) ನಿಯತಿ (12) ಜ್ಞಾತೃ (13) ಮನ (14) ಅಹಂಕಾರ (15) ಬುದ್ಧಿ (16)

ಚಿತ್ತ (17) ಉದಾನ (18) ಪ್ರಾನ (19) ವ್ಯಾನ (20) ಸಮಾನ (21) ಅಪಾನ (22) ಶ್ರೋತ್ರ (23) ತ್ವಘ (24) ನೇತ್ರ (25) ರಸನ (26) ಘ್ರಾಣ (27) ಶಬ್ಧ (28) ಸ್ಪರ್ಶ (29) ರೂಪ (30) ರಸ (31) ಗಂಧ (32) ವಾಕ್ (33) ಪಾಣಿ (34) ಪಾದ (35) ಉಪಸ್ಥ (36) ಪಾಯು –

ಈ '36 ತತ್ತ್ವ'ಗಳ ವಿಷಧೀಕರಣ ಹಾಗೂ ಅವುಗಳ ಸರಿಯಾದ ತಿಳುವಳಿಕೆಯೇ ಸಾಧಕನ ದೇಹದಲ್ಲಿನ 'ಲಿಂಗತತ್ತ್ವ'ದ ಅಸ್ತಿತ್ವವನ್ನು ತಿಳಿಯಲು; ಹಾಗೂ ಅವನು ತನ್ನ ಸಾಧನೆಗಳ ಮೂಲಕ ಆ 'ಅಖಂಡ ಚೈತನ್ಯಾತ್ಮಕ ಶಕ್ತಿ ಸ್ವರೂಪ "ಲಿಂಗ ತತ್ತ್ವ'ವೇ ಆಗುವ ಇಲ್ಲಾ ಸಾಧನ ಮಾರ್ಗಗಳ ತಿಳುವಳಿಕೆ ಹಾಗೂ ಆಚರಣೆಗಳಿಗೆ ಆಧಾರಗಳಾಗಿರುತ್ತದೆ. ಈ '36 ತತ್ತ್ವ'ಗಳು ಮೂಲಭೂತವಾಗಿ 'ಸಾಕಾರ ಲಿಂಗತತ್ತ್ವ' ಸ್ವರೂಪಗಳೇ ಆಗಿವೆ. ಈ ಸಾಕಾರ ಸ್ವರೂಪ ಲಿಂಗತತ್ತ್ವಗಳ ಅಸ್ಥಿತ್ವಕ್ಕೆ ಕಾರಣವಾಗಿ ನಿರಾಕಾರ ಲಿಂಗತತ್ತ್ವಗಳನ್ನು ಶಾಸ್ತ್ರ ಹಾಗೂ ಅನುಭಾವ ಸಾಹಿತ್ಯಗಳಲ್ಲಿ ನಾಲ್ಕು ನೆಲೆಗಳಲ್ಲಿ ತಿಳಿದು ನಿರೂಪಿಸಲಾಗಿದೆ. ಈ ನಾಲ್ಕು ನೆಲೆಯ ಲಿಂಗತತ್ತ್ವಗಳೇ (1) ನಿಷ್ಕಲ (2) ಶೂನ್ಯ (3) ನಿಃಶೂನ್ಯ, ಹಾಗೂ (4) ಸಹಜ ಸ್ಥಿತಿಗಳಾಗಿವೆ. ಈ ನಾಲ್ಕು ನೆಲೆಯ ನಿರಾಕಾರ ಲಿಂಗತತ್ತ್ವಗಳನ್ನು "ಪರಶಿವ" ತತ್ತ್ವವೆಂದು ಕರೆಯಲಾಗಿದೆ. ಅಂದರೆ 'ಪರಶಿವ ತತ್ತ್ವ'ವು ನಿರಾಕಾರ ಲಿಂಗತತ್ತ್ವ ಸ್ವರೂಪವಾದ ನಿಷ್ಕಲ; ಶೂನ್ಯ; ನಿಃಶೂನ್ಯ ಹಾಗೂ ಸಹಜ ಸ್ಥಿತಿಗಳಾಗಿದ್ದು; ಈ ಎಲ್ಲಾ ನಿರಾಕಾರ – ಸಾಕಾರ ಲಿಂಗತತ್ತ್ವ ಸ್ವರೂಪಗಳ ಮೂಲದಲ್ಲಿ 'ಸಹಜ' ಸ್ಥಿತಿಯ ನಿರಾಕಾರ ಲಿಂಗತತ್ತ್ವವಿರುತ್ತದೆ. ಅಂದರೆ ಈ ನಿರಾಕಾರ – ಸಾಕಾರ ತತ್ತ್ವಗಳನ್ನು ಕ್ರಮವಾಗಿ; ಸಹಜ, ನಿಃಶೂನ್ಯ, ಶೂನ್ಯ, (ನಿಷ್ಕಲ) ಪರಶಿವ, ಶಿವ, ಶಕ್ತಿ ಇತ್ಯಾದಿ ವಾಯು ತತ್ತ್ವದವರೆಗೆ ತಿಳಿಯಬಹುದಾಗಿದೆ. ಈ ತತ್ತ್ವಗಳಲ್ಲಿ ಕೆಲವೊಂದು ತತ್ತ್ವಗಳು ಅನೇಕ ಪರ್ಯಾಯ ಹೆಸರುಗಳನ್ನು ಪಡೆದುಕೊಂಡಿರುತ್ತವೆ. ಈ ಪರ್ಯಾಯ ಹೆಸರುಗಳು "ಪೌರಾಣಿಕ" ಹೆಸರುಗಳಾಗಿದ್ದು,

ಅನೇಕ 'ತಾತ್ವಿಕ' ವಿಚಾರಗಳನ್ನು ಒಳಗೊಂಡಿರುತ್ತದೆ. ಉದಾಹರಣೆಗೆ: ಸಹಜ ಸ್ಥಿತಿಯ ನಿರಾಕಾರ ಲಿಂಗ ತತ್ತ್ವವನ್ನು, ನಿಜ; ಅನಾದಿಜಂಗಮ; ಶರಣ; ಶಿವಯೋಗಿ; ವಿಶ್ವ ಪ್ರಜ್ಞೆ **(Universal Conscious State) Precordial State of Consciousness,** ಪೂರ್ಣ ಪ್ರಜ್ಞೆ ಎಂದು ಅನೇಕ ಪರ್ಯಾಯ ಹೆಸರುಗಳಿಂದ ಕರೆಯಲಾಗಿದೆ. ಈ ಅನೇಕ ಹೆಸರುಗಳು ಆ ಸಹಜ ಸ್ಥಿತಿಯ ಅನೇಕ ತಾತ್ವಿಕ ವಿಚಾರ ಸಂಬಂಧಿತ ವಿವರಗಳನ್ನು ಪ್ರತ್ಯೇಕ, ಪ್ರತ್ಯೇಕವಾಗಿ ಪ್ರತಿಪಾತಿದಿಸುತ್ತವೆ. ಈ ಹಿನ್ನೆಲೆಗಳ ಚಿಂತನೆಗಳಲ್ಲಿ 36 ತತ್ತ್ವಗಳನ್ನು ಸಾಕಾರ – ನಿರಾಕಾರ ಲಿಂಗತತ್ತ್ವಗಳ ನೆಲೆಗಳಲ್ಲೂ ಹಾಗೂ ಪೌರಾಣಿಕ ಹೆಸರುಗಳ ನೆಲೆಯಲ್ಲೂ ಗ್ರಹಿಸಲೇಬೇಕಾದ ಅನಿವಾರ್ಯಗಳಿವೆ. ಈ 36 – ತತ್ತ್ವಗಳ ಸ್ವರೂಪ; ನಿರಾಕಾರ ಲಿಂಗ ತತ್ತ್ವಗಳು ಹಾಗೂ ಇವುಗಳ ಸಂಬಂಧಿತ ಎಲ್ಲಾ ಪೌರಾಣಿಕ ಹೆಸರುಗಳ ಅನ್ವಯಗಳನ್ನು ಕ್ರಮವಾಗಿ ತಿಳಿಯುವ ಮುಂಚೆ; ಸಾಧಕನ ದೇಹದಲ್ಲಿರುವ "ದಶ–ಚಕ್ರ"ಗಳ ವಿವರಣೆಗಳನ್ನು ಗ್ರಹಿಸಬೇಕಾಗುತ್ತದೆ. ಈ ಸಾಧಕನ ದೇಹದಲ್ಲಿನ ದಶ–ಚಕ್ರಗಳಿಗೂ ಪ್ರಜ್ಞಾ ಈ 36 ತತ್ತ್ವಗಳಿಗೂ, ಹಾಗೂ ಪೌರಾಣಿಕ ಹೆಸರುಗಳಿಗೂ ಅತ್ಯಂತ ನಿಕಟ ಸಂಬಂಧಗಳಿವೆ. ಹಾಗೂ ಒಂದಕ್ಕೊಂದು ಪರ್ಯಾಯ ಸ್ಥಿತಿಗಳಿವೆ.

### 4. ದಶ – ಚಕ್ರಗಳು

ಸಾಧಕನ ದೇಹದಲ್ಲಿ ಕ್ರಮವಾಗಿ ದಶ–ಚಕ್ರಗಳನ್ನು ಗುರುತಿಸಬಹುದಾಗಿದೆ. ಇವು ಕ್ರಮವಾಗಿ (1) ಆಧಾರ ಚಕ್ರ; (2) ಸ್ವಾಧಿಷ್ಠಾನ ಚಕ್ರ (3) ಮಣಿಪೂರಕ ಚಕ್ರ (4) ಅನಾಹುತ ಚಕ್ರ (5) ವಿಶುದ್ಧಿ ಚಕ್ರ (6) ಆಜ್ಞಾ ಚಕ್ರ (7)

ಸಹಸ್ರಾರ ಚಕ್ರ  (8) ಶಿಖಾಚಕ್ರ (9) ಪಶ್ಚಿಮ ಚಕ್ರ (10) ಅಣುಚಕ್ರಗಳಾಗಿವೆ. ಈ ಚಕ್ರ ಸ್ಥಾನಗಳು ಸಾಧಕನ ದೇಹದಲ್ಲಿ ಈ ಸ್ಥಾನಗಳಲ್ಲಿ ಅಸ್ಥಿತ್ವದಲ್ಲಿವೆ. ಸಾಧಕನ ದೇಹದ ಗುದ ಸ್ಥಾನ  ಹಾಗೂ ಶಿಶ್ನದಲ್ಲಿನ ಚೌಕ ಸ್ಥಾನದಲ್ಲಿ ಅವನ

ಆಧಾರ ಚಕ್ರವಿದೆ. ಶಿಶ್ನ (ಜನನೇಂದ್ರಿಯದ) ಸ್ಥಾನದ ಸ್ವಲ್ಪ ಮೇಲಿನ ಸ್ಥಾನದ ನೇರವಾಗಿ ಹಿದಕ್ಕೆ ಬೆನ್ನು ಹುರಿಯಲ್ಲಿ 'ಸ್ವಾಧಿಷ್ಠಾನ ಚಕ್ರ'ವಿದೆ. ಹೊಟ್ಟೆಯಲ್ಲಿ 'ಮಣಿಪೂರಕ ಚಕ್ರ'ವಿದೆ. ಎದೆ ಗೂಡಿಗೆಯ ಹಿಂದೆ ನೇರವಾಗಿ ಬೆನ್ನು ಹುರಿಯಲ್ಲಿ 'ಅನಾಹುತ ಚಕ್ರ'ವಿದೆ. ಗಂಟಲು (ಕುತ್ತಿಗೆ, ಕಂಠ) ಹಿಂದಿನ ನೇರವಾದ ಬೆನ್ನು ಹುರಿಯ ಸ್ಥಾನದಲ್ಲಿ 'ವಿಶುದ್ಧಿ ಚಕ್ರ'ವಿದೆ. ಎರಡು ಕಣ್ಣುಗಳ ಮಧ್ಯದಲ್ಲಿನ ಹುಬ್ಬುಗಳ ಮಧ್ಯದಲ್ಲಿ 'ಆಜ್ಞಾ ಚಕ್ರ' ಸ್ಥಾನವಿದೆ. ನೆತ್ತಿಯಲ್ಲಿ 'ಸಹಸ್ರಾರ ಚಕ್ರ' ಸ್ಥಾನವಿದೆ. ತಲೆಯ ಹಿಂದಿನ ಭಾಗದಲ್ಲಿ ಶಿಖಾ ಸ್ಥಾನದಲ್ಲಿ 'ಶಿಖಾ ಚಕ್ರ'ವಿದೆ. ಆಜ್ಞಾ ಚಕ್ರದ ನೇರವಾದ ಹಿಂಬದಿಯ ತಲೆಯ ಸ್ಥಾನದಲ್ಲಿ 'ಪಶ್ಚಿಮ ಚಕ್ರ'ವಿದೆ. ತಲೆಯ ಹಿಂಬದಿಯ ಕೆಳಗೆ ಒಂದು ಸಣ್ಣ ಗುಣಿ ಸ್ಥಾನದಲ್ಲಿ 'ಅಣು ಚಕ್ರ'ವಿದೆ. ಈ ಎಲ್ಲಾ ಸಾಧಕನ ದೇಹದಲ್ಲಿನ ದಶವಿತ್ರ ಸ್ಥಾನಗಳನ್ನು 'ಚಿತ್ರ–1' ರಲ್ಲಿ ನಿರೂಪಿಸಲಾಗಿದೆ. ಈ ಚಕ್ರಗಳು (ದಶ–ಚಕ್ರಗಳು) ಸಾಧಕನ ದೇಹದಲ್ಲಿನ ಜೀವಂತ ಪಳೆಯುಳಿಕೆಗಳಾಗಿವೆ. **(Active fessil System).** ಅಂದರೆ, ಇಡೀ ಸೃಷ್ಠಿಯ ಎಲ್ಲಾ ವಿಚಾರಗಳನ್ನೊಳಗೊಂಡ ಜೀವಂತ ಪಳೆಯುಳಿಕೆಗಳಾಗಿವೆ. ಈ ಜೀವಂತ ಪಳೆಯುಳಿಕೆಗಳ ಸ್ಪಂದನ, ಶಬ್ಧ ಮತ್ತು ಬೆಳಕು; ಹಾಗೂ ಇತರೇ ತರಂಗಾಂತರಗಳ ಮೂಲಕ ಅಂದರೆ ಕಂಪನಗಳ **(vibrations)** ಮೂಲಕ ಸಾಧಕನ ಅನುಭವ ಬರುತ್ತದೆ. ಈ ಸೃಷ್ಠಿ ಕಾರ್ಯದ (ಮೊದಲಿನಿಂದ ಇದುವರೆವಿಗೆ) ಎಲ್ಲಾ ಮಜಲುಗಳ ಸ್ಥಿತಿ–ಗತಿಗಳ, ಎಲ್ಲಾ ವಿಚಾರಗಳನ್ನು ತರಂಗಾಂತರಗಳ **(vibrations)** ಮೂಲಕ ಜೀವಂತ ಪಳೆಯುಳಿಕೆಗಳಾಗಿ ದಾಖಲಾತಿ **(Register)** ಯಾಗಿದೆ. ಹೀಗಾಗಿ ಸಾಧಕನಿಗೆ ಅವನ ದೇಹದಲ್ಲಿನ ಈ ಜೀವಂತ ಪಳೆಯುಳಿಕೆಗಳ ಸ್ಪಂದನಗಳು

'ಹೇಗಾದರೂ' ಉಂಟಾದಾಗ; ಅವನಿಗೆ ಈ ಸೃಷ್ಠಿ ಕಾರ್ಯದ ಎಲ್ಲಾ ಮಜಲುಗಳ ಅರಿವು **(Conscious States )** ಅವನ ಅನುಭವಕ್ಕೆ **(experience)** ಬರುತ್ತದೆ. ಇಲ್ಲಿ 'ಹೇಗಾದರೂ' ಎಂಬ ಶಬ್ಧಕ್ಕೆ ಅರ್ಥ; ಯಾವುದಾದರೊಂದು ಜಲುಗಳ ಅರಿವಿನ (ಪ್ರಜ್ಞಾಸ್ಥಿತಿಗಳ) ಅನುಭಾವಗಳು  **(Conscious States)** ಈ ತರಂಗಾಂತರಗಳ ಕಂಪನಗಳಿಂದುಂಟಾದ (ಚಕ್ರ ಸ್ಥಾನಗಳಲ್ಲಿನ ಜೀವಂತ ಪಳೆಯುಳಿಕೆಗಳ ಕಂಪನಗಳಿಂದುಂಟಾದ) ಅನುಭವವೇ ಕಾರಣವಾಗಿರುತ್ತದೆ ಎಂಬ ಮಾತಾಗಿದೆ. ಈ ವಿಚಾರದಲ್ಲಿ ಯಾವುದೇ ಸಂಶಯಗಳು ಇರಲು ಸಾಧ್ಯವೇ ಇಲ್ಲ. ಸಾಧಕನ ದೇಹದಲ್ಲಿ ಈ ವ್ಯವಸ್ಥೆಯ ಅನುಕೂಲವಿರುವ ಕಾರಣದಿಂದಾಗಿಯೇ ಅವನಿಗೆ ಈ ಸೃಷ್ಠಿ ಕಾರ್ಯದ ಎಲ್ಲಾ ಮಜಲುಗಳ "ಅರಿವು" **(Conscious States)** ಅಂದರೆ, "ಪ್ರಜ್ಞಾ" ಸ್ಥಿತಿಗಳು ಅನುಭಾವಕ್ಕೆ ಬರಲು ಸಾಧ್ಯವಾಗುತ್ತದೆ. ಆದರೆ ಸಾಧಕ ವ್ಯಕ್ತಿಯ ದೇಹದಲ್ಲಿರುವ ಎಲ್ಲಾ ಚಕ್ರಗಳ ಸ್ಥಿತಿ–ಗತಿಗಳು ಸುವ್ಯವಸ್ಥಿತವಾಗಿ, ಜೀವಂತವಾಗಿ ಕಾರ್ಯಗತ **(Functional)** ವಾಗಿರಬೇಕು. ಇದು ಎಲ್ಲಾ ವ್ಯಕ್ತಿಗಳ ದೇಹದಲ್ಲಿ ಹುಟ್ಟಿನಿಂದಲೇ ಬಂದಿರುವ ಸ್ಥಿತಿ–ಗತಿಗಳಾಗಿರುವುದಿಲ್ಲ. ಕೆಲವು ಚಕ್ರ ಸ್ಥಾನಗಳೂ ಪೂರ್ಣವಾಗಿ, ಮುಚ್ಚಿಕೊಂಡಿದ್ದು, ಕೆಲವು ಅರ್ಧ ತೆರೆದುಕೊಂಡಿದ್ದು, ಕೆಲವು ಸಾಧ್ಯವೇ ಇಲ್ಲದ ಕಾರ್ಯಗತ ಸ್ಥಿತಿಯಲ್ಲಿದ್ದು; ಅನೇಕಾನೇಕ ಸ್ಥಿತಿಗಳಲ್ಲಿ ಪ್ರಾಣಧಾರಿತ ಪ್ರಕ್ರಿಯೆಗಳಾಗಿರಬಹುದು.

ಹುಟ್ಟಿನಿಂದ ಬಂದಿದ್ದು; ನಾನಾ ರೀತಿಯ ಸ್ಥಿತಿ–ಗತಿಗಳಲ್ಲಿದ್ದು, ಕಾರ್ಯಗತವಾಗಿರುತ್ತದೆ. ಹೀಗಾಗಿ ಸಾಧಕ ವ್ಯಕ್ತಿಯ 'ದಶ–ಚಕ್ರ'ಗಳ ಮತ್ತು ಅವುಗಳ ಸ್ಥಾನಗತ ಸ್ಥಿತಿ–ಗತಿಗಳ ನಿರ್ಣಯಗಳಿಂದ ಅವನ "ಗುಣ–ಸ್ವಭಾವ–ಅನುಭಾವಗಳು ಅಸ್ತಿತ್ವಗಳಿರುತ್ತವೆ. ಹೀಗಾಗಿ ಒಬ್ಬ ಸಾಧಕ ವ್ಯಕ್ತಿಯ ಆಧ್ಯಾತ್ಮಿಕ ವಿಚಾರಗಳ ಗ್ರಹಿಕೆ. ಸಾಧನೆ, ಅನುಭಾವಗಳು ಖಂಡಿತ ಅವನ ದೇಹದ ಚಕ್ರ ಸ್ಥಾನಗಳ ಸ್ಥಿತಿ–ಗತಿಗಳ ಕಾರ್ಯಗತ ಸ್ವರೂಪಗಳನ್ನು **(Functional States)** ಅವಲಂಬಿಸಿರುತ್ತದೆ. ಇಲ್ಲಾ ಈ ಸಾಧಕ ವ್ಯಕ್ತಿಯು ಹುಟ್ಟಿನಿಂದಲೇ ಅವನ ದೇಹದಲ್ಲಿನ ಚಕ್ರ ಸ್ಥಾನಗಳು ಉತ್ತಮವಾಗಿ ತಮ್ಮ ಕಾರ್ಯಗಳನ್ನು ಮಾಡುತ್ತಿರಬೇಕು. ಇಲ್ಲಾ ಹುಟ್ಟಿದ ಮೇಲೆ ತನ್ನ ಸಾಧನ ಕ್ರಮಗಳಿಂದ; ಅಂದರೆ ಆಧ್ಯಾತ್ಮಿಕ ಸಾಧನೆಗಳಿಂದ, ಅಥವಾ ಯೋಗ ಪ್ರಕ್ರಿಯೆಗಳಿಂದ ಉತ್ತಮ ಮಾಡಿಕೊಳ್ಳಬೇಕು. ಈ ವಿಚಾರಗವನ್ನು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವು "ಪಿಂಡ" ಶಬ್ಧದಿಂದ ನಿರೂಪಿಸುತ್ತದೆ. ಒಬ್ಬ ವ್ಯಕ್ತಿಯು ಆಧ್ಯಾತ್ಮಿಕವಾಗಿ ಏಳ್ಗೆಯನ್ನು ಪಡೆಯಬೇಕಾದರೆ ಅವನು "ಶುದ್ಧಾಂತಃಕರಣ" ದೇಹಿಯಾಗಿರಬೇಕು ಎಂದು ಪ್ರತಿಪಾದಿಸುತ್ತದೆ. 'ಅಂತಃಕರಣ'ಗಳೆಂದರೆ 'ಮಾವ, ಅಹಂಕಾರ, ಬುದ್ಧಿ, ಚಿತ್ತ'ಗಳಾಗಿವೆ (ಅಂತಃಕರಣ ಚತುಷ್ಟಯ) (ಇವು 36–ತತ್ತ್ವಗಳಲ್ಲಿ ಕ್ರಮವಾಗಿ 13, 14, 15, 16ನೆಯ ತತ್ತ್ವಗಳಾಗಿವೆ) ಈ 'ಶುದ್ಧಾಂತಃಕರಣ' ದೇಹಿಯಾಗಿರಬೇಕಾದರೆ. ಅವನ ದೇಹದಲ್ಲಿನ ಎಲ್ಲಾ ಚಕ್ರಗಳು ಸುಸ್ಥಿತಿಯಲ್ಲಿರಬೇಕಾಗುತ್ತದೆ. ಇಂತಹ ಚಕ್ರಗಳ ಸುಸ್ಥಿತಿಯನ್ನು "ಚಕ್ರ–ಶುದ್ಧಿ" ಎಂದು ತಿಳಿಯಲಾಗಿದೆ.

ಈ "ಚಕ್ರ–ಶುದ್ಧಿ"ಯು ಸಾಧಕ ವ್ಯಕ್ತಿಗೆ ಹುಟ್ಟಿನಿಂದಲೇ ಬಂದಿರಬೇಕು, ಇಲ್ಲಾ ಹುಟ್ಟಿದ ಮೇಲೆ ಸಾಧನೆಗಳಿಂದ ಪಡೆಯಬೇಕಾಗುತ್ತದೆ.

ಬಹು ಜನ್ಮ ಕೃತೈ:। ಪುಣ್ಯೈಃ । ಪ್ರಕ್ಷೀಣೇ । ಪಾಪ ಪಂಜರೇ ।

ಶುದ್ಧಾಂತಃ ಕರಣೋ । ದೇಹೀ । ಪಿಂಡಶಬ್ದೇನ । ಗೀಯತೇ।

ಬಹು ಜನ್ಮಗಳಲ್ಲಿ ಮಾಡಿದ ಪುಣ್ಯ ವಿಶೇಷದಿಂದ ಪಾಪವೆಂಬ ಪಂಜರ

ಆಧ್ಯಾತ್ಮ ಜೀವಿಯಾಗಬೇಕಾಗಲೀ, ಅಥವಾ ಯಾವುದೇ ಕೆಲಸದಲ್ಲಿ ಪ್ರಗತಿ ಸಾಧಿಸಬೇಕಾಗಲೀ, ಮನುಷ್ಯನು 'ಶುದ್ಧಾಂತಃಕರಣ'ವುಳ್ಳ ದೇಹಿಯಾಗಿರಲೇ ಬೇಕಾಗುತ್ತದೆ. ಅಂದರೆ ಅವನ 'ಮಥ'ವು ಶುದ್ಧವಾಗಿದ್ದು, ಅದೇ ಮನವು ಅಹಂಕಾರ (ಸಾತ್ವಿಕ) ಬುದ್ಧಿ (**intellect**) ಮತ್ತು ಚಿತ್ತ (**confirmed mind**) ಖಚಿತವಾದ ಅಭಿಪ್ರಾಯವುಳ್ಳ ಮನವೇ ಚಿತ್ತವಾಗಿದೆ. ಇಲ್ಲಿನ ಅಭಿಪ್ರಾಯವೆಂದರೆ ಯಾವುದೇ ವಿಚಾರ, ಅಥವಾ ವಿಷಯದ ಬಗೆಗಿನ ಖಚಿತವಾದ ಅಭಿಪ್ರಾಯವುಳ್ಳ ಮನಸ್ಸು ಎಂದರ್ಥ ಮಾಡಬೇಕು. **A reflective confirmed Mind** ಎಂದೂ ಸಹ ಈ ಚಿತ್ತ ಸ್ವರೂಪವನ್ನು ತಿಳಿಯಬಹುದಾಗಿದೆ. ಸ್ವರೂಪವನ್ನು ಪಡೆದಾಗ ಅದೆಲ್ಲಾ 'ಶುದ್ಧ' (**pure**) ಆಗಿದ್ದರೆ, ಅಂತಹ ಶುದ್ಧವಾದ ಮನಸ್ಥಿತಿಯಿಂದ ಸಾಧಕನು ಸೃಷ್ಟಿಕಾರ್ಯದಲ್ಲಿನ ಎಲ್ಲಾ "ಲಿಂಗತತ್ತ್ವ" ಸ್ವರೂಪದ ಅರಿವನ್ನು ಗ್ರಹಿಸಲು ಸಾಧ್ಯವಾಗುತ್ತದೆ. ಈ ಅರಿವಿನ ಅಥವಾ ಪ್ರಜ್ಞಾ ಸ್ಥಿತಿಗಳೇ **Conscious States of all stages of creations** ಆಗಿದೆ. ಇಂತಹ ಶುದ್ಧವಾದ ಮನ ಸ್ಥಿತಿಯು

(ಶುದ್ಧ ಅಂತಃಕರಣವು) ಸಾಧಕ ಮನುಷ್ಯ "ಬಹುಜನ್ಮ"ಗಳಲ್ಲಿ ಮಾಡಿದ "ಪುಣ್ಯ ವಿಶೇಷವಾದ" ಕಾರ್ಯಗಳಿಂದ ಉಂಟಾದ ಪಾಪದ ಬಲೆಯು ಕ್ಷೀಣವಾಗಿ, ಅವನಿಗೆ ಶುದ್ಧವಾದ ಮನವು (ಅಂತಃಕರಣವು) ಪ್ರಾಪ್ತಿಯಾಗಿರುತ್ತದ.ಎ ಇಂತಹ ಶುದ್ಧವಾದ ಮನವು (ಅಂತಃಕರಣವು) ಮನುಷ್ಯನಿಗೆ ಅವನ ಕರ್ಮಗಳು ಪರಿಪಾಕ್ವವಾದಾಗ, ಮಲ ವಾಸನೆಗಳು ಕ್ಷೀಣವಾದಾಗ, ಮತ್ತು ಶಿವನ ಅನುಗ್ರಹವು ಪ್ರಾಪ್ತವಾದಾದ ಉಂಟಾಗುತ್ತದೆ. ಇಂತಹ ಶುದ್ಧ ಮಾನಸ ವ್ಯಕ್ತಿಗೆ, ಅವನ ದೇಹದಲ್ಲಿನ 'ದಶ-ಚಕ್ರಗಳ' ಶುದ್ಧಿ

ಸ್ವಕರ್ಮ ಪರಿಪಾಕೇನ / ಪ್ರಕ್ಷಿಜಣ ಮಲವಾಸದಃ / ।

ಶಿವಪ್ರಸಾದಾಜೀವ್ಯೋನಯಂ / ಜಾಯತೇ / ಶುದ್ಧ ಮಾನಸಃ / ।

ಈ ಜೀವನು ತನ್ನ ಕರ್ಮಗಳು ಪರಿಹಾರವಾದಾಗ \ ಸಿ.ಶಿ (5-52)

ಮಲವಾಸನೆಗಳು ಕ್ಷೀಣವಾದಾಗ ಮತ್ತು 'ಶಿವನ' ಅನುಗ್ರಹವು

ಪ್ರಾಪ್ತವಾದಾಗ 'ಶುದ್ಧ' ಮಾನವನಾಗುತ್ತಾನೆ. (ಇಲ್ಲಿ ಶಿವತತ್ತ್ವವೆಂದರೆ ಸಾಧಕನ ದೇಹದಲ್ಲಿರುವ 36 ತತ್ತ್ವಗಳಲ್ಲಿನ ಮೊದಲನೆಯ ಸಾಕಾರ

ಉಂಟಾಗಿರುತ್ತದೆ. ಆದರೆ, ಅಂತಹ ಚಕ್ರ – ಶುದ್ಧಿಯಿಲ್ಲದೆ ಜಗತ್ತಿಗೆ ಬಂದಿರುವ 'ಜೀವಿ'ಯು (ಸಾಧಕ ಮನುಷ್ಯನು) ತನ್ನ ಸಾಧನೆಗಳಿಂದ 'ಚಕ್ರ-ಶುದ್ಧಿ'ಯನ್ನು ಮಾಡಿಕೊಳ್ಳಬೇಕಾಗುತ್ತದೆ. ಒಂದು ವಿಷಯ ಮಾತ್ರ ಸ್ಪಷ್ಟವಾಗಿ ವಿಷಧೀಕರಣಗಳಿಗೆ ಬರಬೇಕಾಗುತ್ತದೆ. ಆಧ್ಯಾತ್ಮ ಜೀವಿಗೆ 'ಚಕ್ರ-ಶುದ್ಧಿ' ಅತ್ಯಂತ ಅವಶ್ಯವಾದ ಅವಸ್ಥೆ ಅಥವಾ ನಿಬಂಧನೆ **(condition)** ಯಾಗಿದೆ.ಆದ್ದರಿಂದ ಆಧ್ಯಾತ್ಮ ಜೀವಿಯು ತನ್ "ದೈವಸಾಕ್ಷಾತ್ಕಾರ"ಗಳ ಸಾಧನೆಯ ಭಾಗವಾಗಿ 'ಚಕ್ರ-ಶುದ್ಧಿ'ಯ ಪ್ರಕ್ರಿಯೆಗಳನ್ನು ಸಹ ರೂಢಿಸಿಕೊಳ್ಳುವ ಕ್ರಮಗಳಿವೆ. 'ಚಕ್ರ-ಶುದ್ಧಿ'ಯ ಬಲದಿಂದಲೇ ಸಾಧಕನಿಗೆ ಅವನ 'ದೈವ' ಸಾಕ್ಷಾತ್ಕಾರಗಳ ನೆಲೆಗಳಲ್ಲಿ ಪ್ರಗತಿಯಾಗಿ, 'ಸಿದ್ಧಿ'ಯುಂಟಾಗುತ್ತದೆ. ಇಲ್ಲಿ ಸಿದ್ಧಿಯೆಂದರೆ ಸಾಧಕನ ಮನಸ್ಸು: 'ಶಿವ, ಪರಶಿವ' ಸ್ವರೂಪದ ಲಿಂಗತತ್ತ್ವದ ನೆಲೆಗಳನ್ನು ಕಂಡುಕೊಳ್ಳುವುದಾಗಿದೆ. (36 ತತ್ತ್ವಗಳ ವಿಭಾಗದಲ್ಲಿ ಚಿಂತಿಸಿರುವಂತೆ)

ಇಲ್ಲಿ 'ಚಕ್ರ ಸ್ಥಾ'ಗಳನ್ನು ಪೌರಾಣಿಕವಾಗಿ, ಸಾಂಕೇತಿಕವಾಗಿ ಅನೇಕ ಹೆಸರುಗಳಿಂದ ಗುರುತಿಸಲಾಗಿದೆ. ಈ ಹೆಸರುಗಳು ಆಯಾ ಚಕ್ರಗಳ (ದಶ-ಚಕ್ರಗಳ) "ಸ್ವರೂಪ, ಹಾಗೂ ಅವುಗಳ ಅನೇಕ ರೀತಿಯ ಗುಣ ಧರ್ಮಗಳನು" ಹಾಗೂ ವಿಶೇಷವಾದ "ಶಕ್ತಿ-ಚೈತನ್ಯ" ಸ್ವರೂಪಗಳನ್ನು ಪ್ರತಿಪಾದಿಸುತ್ತವೆ. ಈ ಪೌರಾಣಿಕವಾದ ಸಾಂಕೇತಿಕ ಹೆಸರುಗಳಲ್ಲದೆ ಈ ಚಕ್ರ ಸ್ಥಾನಗಳಿಗೆ 36 – ತತ್ತ್ವ ಸ್ವರೂಪದ ಲಿಂಗತತ್ತ್ವದ ಅನ್ವಯಗಳನ್ನು ಸಹ ಮಾಡಬಹುದಾಗಿದೆ

ಅಜಪ ಜಪ: ಗಾಯತ್ತಿ ಮಂತ್ರ ಜಪ: ಶಿವ ಪಂಚಾಕ್ಷರ ಮಹಾಮಂತ್ರ ಜಪ: ಅಥವಾ ಷಡಕ್ಷರ ಮಂತ್ರ ಜಪ; ತಂತ್ರ ಶಾಸ್ತ್ರದಲ್ಲಿ ಹೇಳಿರುವ 'ಬೀಜಾಕ್ಷರ' ಮಂತ್ರದ ಅಕ್ಷರಗಳ ಪ್ರಯೋಗ ಸಾಧನೆ: ಚಕ್ರಗಳ ದಳಗಳ ಬೀಜಾಕ್ಷರ ಮಂತ್ರದ ಸ್ವರಗಳು, ಹಾಗೂ ವ್ಯಂಜಗಳು; ಇತ್ಯಾದಿಗಳು; ಭಾರತೀಯ ಸಂಗೀತ ಪದ್ಧತಿಯ

ಒಂದು ಸ್ಥಾಯಿಯ (ಭೂಮಿಗತಿ ಸಂಬಂಧಿತ) 22 ಸ್ವರಗಳೂ ಸಹ ಸಾಧಕನ ಶರೀರದಲ್ಲಿನ ಚಕ್ರ ಶುದ್ಧಿಗಳನ್ನು ಮಾಡುವ ಸಾಮರ್ಥ್ಯ ಹೊಂದಿದೆ.

ಈ ರೀತಿಯಲ್ಲಿ ದಶ–ಚಕ್ರ ಸ್ಥಾನಗಳಿಗೆ, ಸಾಂಕೇತಿಕ ಗುಣ ಧರ್ಮಾತ್ಮಕವಾದ ಶಕ್ತಿ–ಚೈತನ್ಯಾತ್ಮಕ ಪೌರಾಣಿಕ ಹೆಸರುಗಳನ್ನು, 36 ತತ್ತ್ವ ಸ್ವರೂಪದ ಲಿಂಗತತ್ತ್ವದ ನೆಲೆಯ 'ಲಿಂಗ ಸ್ವರೂಪಗಳನ್ನು' ಹಾಗೂ ಆಯಾ ಚಕ್ರಸ್ಥಾನಗಳ ಪ್ರಜ್ಞಾ: ಅರಿವಿನ **(Conscious States)** ಸ್ವರೂಪಗಳನ್ನೂ ಸಹ ಒಟ್ಟಿಗೆ ಒಂದಕ್ಕೊಂದು ಪರ್ಯಾಯವಾಗಿ ತಿಳಿಯಬೇಕಾಗುತ್ತದೆ. ಈ ವಿಚಾರಗಳನ್ನು, ಸಮನ್ವಯ ಸ್ವರೂಪದಲ್ಲಿ ಚಿತ್ರ–3 **Book of Page: 2** ರಲ್ಲಿ ತೋರಿಸಲಾಗಿದೆ. ಉದಾಹರಣಾರ್ಥವಾಗಿ ಯಾವುದೇ ಸಾಧಕನ "ಆಜ್ಞಾ ಚಕ್ರದ" ಸ್ವರೂಪವನ್ನು "ಲಿಂಗತತ್ತ್ವ" ಸ್ವರೂಪದಲಿ 'ಮಹಾಲಿಂಗ' ವೆಂತಲೂ; 36–ತತ್ತ್ವ ಸ್ವರೂಪದಲ್ಲಿ "ಸಕಲ–ನಿಷ್ಕಲ"ವೆಂತಲೂ, ಪೌರಾಣಿಕವಾಗಿ ಶಿವ, ಜೀವ, ಮಹೇಶ್ವರ, ಆದಿ ದೇವ, ಶಂಭು, ಆದಿ, ಶಂಕರ, ರುದ್ರ, ಪಶುಪತಿ, ಸಾಕಾರ ಪರಮಾತ್ಮ ಜ್ಞಾನ ಜಂಗಮ, ಕೃಷ್ಣ, ಮುಕ್ಕಣ್ಣ, ನೀಲಕಂಠ, ಬಾಲಚಂದ್ರ ವಿಭು, ಭವಹರ, ಶರ್ವ, ಶಕ್ತಿ ಮನ್ವಿತ, ಸರ್ವಜ್ಞ, ಹರ, ಬ್ರಹ್ಮಣಿ ಪರಮಾತ್ಮ, ಕೈಲಾಸ, ಕೈವಲ್ಯ, ಪರಮನು, ಸ್ವಾಮಿ, ಶಾಶ್ವತ, ಕೂಡಲಸಂಗಮದೇವ, ವಚನಕಾರರ ವಚನಾಂಕಿತಗಳು; ಪ್ರತಿಪಾದಿಸುತ್ತವೆ. ಶಂಭುವೆಂದರೆ, ಶಾಸ್ತ್ರೀಯವಾಗಿ "ಶಂಭಾವತಿ ಯಸ್ಮಾತ್ ಸಹಃ ಶಂಭುಃ" ಅಂದರೆ ಯಾರಿಂದ ಸುಖವು ಸಿಗುವುವುದೋ ಅವನು ಶಂಭುವೆಂದು ಅಥವಾ ಸುಖಕರ ಭಾವವೆಂತಲೂ ತಿಳಿಯಲಾಗಿದೆ. ಇದೇ ರೀತಿಯಲ್ಲಿ "ಆಜ್ಞಾ ಚಕ್ರದ" ಅನೇಕ ಗುಣಧರ್ಮಗಳನ್ನು ಬೇರೆ ಬೇರೆ ಹೆಸರುಗಳು ಪ್ರತಿಪಾದಿಸುತ್ತವೆ. ಆದರೆ ಆ ಹೆಸರುಗಳ ಉತ್ಪತ್ತಿಯನ್ನು ನಿರೂಪಿಸಬೇಕಾಗುವುದು. 'ಅಜ್ಞಾ' ಚಕ್ರದ 'ಶಕ್ತಿ' ಸ್ವರೂಪವನ್ನು 'ಆದಿಶಕ್ತಿ' ಅಥವಾ 'ಚಿಚ್ಛಕ್ತಿ' ಸ್ವರೂಪವೆಂತಲೂ ತಿಳಿಯಲಾಗುತ್ತದೆ. 'ಸಾಂಭ'ನೆಂದರೆ ಶಿವಶಕ್ತಿ ಸಾಂತನಾದ 'ಉಮಾಸಹಿತನಾದ ಶಿವ' ಸ್ವರೂಪವಾಗಿದೆ; 'ತತ್ತ್ವ' ಸ್ವರೂಪದಲ್ಲಿ ಸಾಧುಕನಿಗೆ ದೊರಕುತ್ತದೆ. ಆದರೆ ಶಿವತತ್ತ್ವ ಸ್ವರೂಪವನ್ನು

ಪಡೆಯಲು ಸಾಧಕನ ಸಾಧನೆಮಾಡಿ ಸಿದ್ಧಿ ಪಡೆಯಬೇಕಾಗುತದೆ. ಈ ಸಿದ್ಧಿಯು ಸಾಧಕನ ಅನುಭವ ಪಡೆದ ಅವನ ಮನಸ್ಥಿತಿಯಾಗಿರುತ್ತದೆ. ಶಿವತತ್ತ್ವವು 36 ತತ್ತ್ವಗಳಲ್ಲಿ ಮೊದಲನೆಯ ತತ್ತ್ವವಾಗಿರುವುದರಿಂದ; ಅದು ಸಾಕಾರ ಲಿಂಗತತ್ತ್ವದ ಮೊದಲನೆಯ ತತ್ತ್ವವಾಗಿರುವುದರಿಂದ; (ಅಖಂಡ ಚೈತನ್ಯಾತ್ಮಕ ಪ್ರಕಟಿತ ಶಕ್ತಿ ಸ್ವರೂಪ ತತ್ತ್ವವಾಗಿರುವುದರಿಂದ) ಆ ಸ್ಥಿತಿಯಲ್ಲಿನ ಶುದ್ಧ ಪ್ರಜ್ಞಾ (ಅರಿವನ್ನು) (ಚಿತ್ರ–3) ಸ್ವರೂಪವನ್ನು ಸಾಧಕನ ಮನವು ಪಡೆಯಬಾಕಾದರೆ ಅವನು ಯಾವುದಾದರೊಂದು "ಸಾಧನ ಪಥ"ವನ್ನು ಅನುಸರಿಸಿ ಸಿದ್ಧಿಯನ್ನು ಪಡೆಯಬೇಕಾಗುತ್ತದೆ. ವೀರಶೈವಧರ್ಮದಲ್ಲಿ ಈ "ಸಾಧನ ಪಥ" "ಇಷ್ಟ ಲಿಂಗೋಪಾದನಾ" ಮೂಲದ "ಷಟ್‌ಸ್ಥಲ ಸಿದ್ಧಾಂತ"ದ ಆಚರಣೆಯಾಗುತ್ತದೆ. ಈ "ಷಟ್‌ಸ್ಥಲ ಸಿದ್ಧಾಂತ"ದ ಆಚರಣೆ ಮಾಡುವಾಗ ಸಾಧಕನು ಆಧ್ಮಾತ್ಮಿಕ ಆವರಣಗಳಾಗಿ 'ಅಷ್ಮಾವರಣ'ಗಳನ್ನು ಹಾಗೂ ಸಾಮಾಜಿಕ ಆವರಣಗಳಾಗಿ 'ಪಂಚಾಚಾರ'ಗಳನ್ನು ಆಚರಿಸುತ್ತಾನೆ. ಈ ರೀತಿಯಲ್ಲಿ ಶಿವ ಸ್ವರೂಪಿಯಾಗಬೇಕಾದ ಸಾಧಕನು "ಇಷ್ಟ ಲಿಂಗೋಪಾಸನೆ"ಯ ಮೂಲದ (1) ಷಟ್ ಸ್ಥಲ ಸಿದ್ಧಾಂತ (2) ಅಷ್ಟಾವರಣ (3) ಪಂಚಾಚಾರಗಳನ್ನು ಆಚರಿಸಬೇಕಾಗುತ್ತದೆ. ಈ ಮೂರನ್ನು ವೀರಶೈವ ಧರ್ಮ ಆಧಾರ ಸ್ಥಂಭಗಳೆಂದು ಕರೆಯಲಾಗಿದೆ. **(Tenets of Virashaivism)** ಇವುಗಳೇ ವೀರಶೈವ ಧರ್ಮದ ಮಂತ್ರ, ಸಿದ್ಧಾಂತ, ತತ್ತ್ವಗಳಾಗಿವೆ.

"ಷಟ್‌ಸ್ಥಲ ಸಿದ್ಧಾಂತ": ಷಟ್ ಲಿಂಗ ಸ್ಥಲ, ಹಾಗೂ ಷಟ್ ಲಿಂಗ ಸ್ಥಲಗಳಾಗಿವೆ. ಷಟ್ ಲಿಂಗಸ್ಥಲಗಳು (1) ಭಕ್ತ (2) ಮಾಹೇಶ (3) ಪ್ರಸಾದ (4) ಪ್ರಾಣಶ್ (5) ಶರಣ (6) ಐಕ್ಯ: ಇದೇ ರೀತಿಯಲ್ಲಿ ಷಟ್ ಲಿಂಗ ಸ್ಥಲಗಳು (1) ಆಚಾರ ಲಿಂಗ ಸ್ಥಲ (2) ಗುರು ಲಿಂಗ ಸ್ಥಲ (3) ಶಿವ ಲಿಂಗ ಸ್ಥಲ (4) ಜಂಗಮಲಿಂಗ ಸ್ಥಲ (5) ಪ್ರಸಾದ ಲಿಂಗ ಸ್ಥಲ (6) ಮಹಾಲಿಂಗ ಸ್ಥಲ "ಅಷ್ಟಾವರಣ": ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷ ಮಂತ್ರ: "ಪಂಚಾಚಾರ": ಲಿಂಗಾಚಾರ; ಸದಾಚಾರ; ಶಿವಾಚಾರ; ಗಣಾಚಾರ, ಭಾತ್ಯಾಚಾರ.

**doctrine of principle** ಗಳಾಗಿವೆ. ಈ ರೀತಿಯಲ್ಲಿ ವೀರಶೈವ ಧರ್ಮವು ತನ್ನ ಸಿದ್ಧಾಂತ, ಅನುಭಾವಗಳನ್ನು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದ ಮೂಲಕವಾಗಿಯೂ, ಬಸವಾದಿ ಶರಣರ ವಚನ ವಾಙ್ಞಯಗಳ ಮೂಲಕ 'ಇಂಠಿಗೆ' ಪ್ರತಿಪಾದಿಸಿಕೊಂಡಿದೆ. ಈ 'ಷಟ್‌ಸ್ಥಲ ಸಿದ್ಧಾಂತ'ದ ಸಾಧನೆಯ ಅನ್ವಯಗಳನ್ನು ಸಾಧಕನಲ್ಲಿ; 'ದಶ–ಚಕ್ರಗಳಲ್ಲಿನ ಪ್ರಜ್ಞಾ ವಿಶೇಷಗಳ ಜೊತೆಯಲ್ಲಿ ಅಧ್ಯಯನ ಮಾಡುವ ಕ್ರಮಗಳನ್ನು ಚಿತ್ರ–4 ರಲ್ಲಿ ಪ್ರತಿಪಾದಿಸಲಾಗಿದೆ. ಹೀಗೆ "ದಶ–ಚಕ್ರ"ಗಳ ಹಿನ್ನೆಲೆಯಲ್ಲಿ ಸಾಧಕನ ಲಿಂಗತತ್ತ್ವ ಹಿನ್ನೆಲೆಗಳು ಪೌರಾಣಿಕ ಹೆಸರುಗಳ ಮೂಲಕ ಚಕ್ರಗಳ ಗುಣಧರ್ಮ ವಿಶೇಷಗಳ 36–ತತ್ತ್ವಗಳ ಅನ್ವಯದ ಸಾಕಾರ–ನಿರಾಕಾರ ಲಿಂಗತತ್ತ್ವಗಳನ್ನು; ಷಟ್ ಸ್ಥಲ ಸಿದ್ಧಾಂತಹ ಸಾಧನೆಯ ಅನ್ವಯಗಳನ್ನು ಹಾಗೂ ಷಟ್ ಸ್ಥಲ ಸಿದ್ಧಾಂತ ಆಧಾರಿತ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ ಪ್ರತಿಪಾದಿತ "ಪಂಚಾಚಾರ ಸ್ಥಲ"ಗಳನ್ನು ಚಿತ್ರ–5 ತೋರಿಸಿರುವಂತೆ "ಅನ್ವಯ" ಮಾಡಿ, ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿನ 'ಶಾಸ್ತ್ರ'ವನ್ನು; ಬಸವಾದಿ ಶರಣರ ವಚನ ವಾಙ್ಮಯದಲ್ಲಿನ 'ಅನುಭಾವ'ಗಳನ್ನು ತಿಳಿದುಕೊಂಡು, ಆಚರಿಸಿ, "ಲಿಂಗತತ್ತ್ವ" ಸ್ವರೂಪ, ದೈವಸಾಕ್ಷಾತ್ಕಾರಗಳನ್ನು ಮಾಡಿಕೊಳ್ಳಲು ಅನುಕೂಲವಾಗುತ್ತದೆ. ಆದ್ದರಿಂದ ಸಾಧಕನ ದೇಹದಲ್ಲಿನ 'ದಶ–ಚಕ್ರ'ಗಳ ನಿರೂಪಣೆಯ ಹಿನ್ನೆಲೆಗಳಲ್ಲಿ ಸ್ಥಾನೀಕವಾಗಿ 'ಶ್ರೀ ಸಿದ್ಧಾಂತ ಶಿಖಾಮಣಿ' ಗ್ರಂಥದಲಿ ನಿರೂಪಿತವಾಗಿರುವ 101 ಸ್ಥಲ ಪ್ರತಿಪಾದಿತವಾದ "ಷಟ್‌ಸ್ಥಲ ಸಿದ್ಧಾಂತ"ವನ್ನು ಹಾಗೂ ಬಸವಾದಿ ಶರಣರ ವಚನ ಪ್ರತಿಪಾದಿತ "ಪಂಚಾಚಾರ ಸ್ಥಲ" ಸ್ವರೂಪದ ಅನುಭಾವಗಳನ್ನು ತಿಳಿದು, ಆಚರಿಸಲು ಅನುಕೂಲವಾಗುವಂತೆ ಈ ಪ್ರಬಂಧವನ್ನು ರಚಿಸಲಾಗಿದೆ. ಈ ಹಿನ್ನೆಲೆಗಳಲ್ಲಿ ಸಾಧಕನ ದೇಹದಲ್ಲಿನ "ದಶ–ಚಕ್ರಗಳ" ಪ್ರತಿಪಾದನೆಗಳು ಬಹಳ ಪ್ರಾಮುಖ್ಯತೆಯನ್ನು ಪಡೆಯುತ್ತದೆ.

"ಪಂಚಾಚಾರ ಸ್ಥಲಗಳು": ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದಗಳೂ. ಈ ಐದು ಷಟ್ ಸ್ಥಲ ಸಿದ್ಧಾಂತದ ಆಧಾರದಲ್ಲಿ ಪ್ರತಿಪಾದಿತವಾಗಿದೆ. "101 ಸ್ಥಲ ಕ್ರಮದ ಷಟ್ ಸ್ಥಲ ಸಿದ್ಧಾಂತ" ನಿರೂಪಣೆಯನ್ನು ಪಂಚಾಚಾರ ಸ್ಥಲಗಳ ನೆಲೆಯಲ್ಲಿ ಪ್ರತಿಪಾದಿಸಲಾಗಿದೆ. ಪಂಚಾಚಾಸ್ಥಲ ನೆಲೆಯ ಪ್ರತಿಪಾದನೆಗಳು 'ಪಂಥ' ನಿರಪೇಕ್ಷ ಅಥವಾ 'ಧರ್ಮ ನಿರಪೇಕ್ಷ ನೆಲೆಯ **(secular)** ಚಿಂತನೆಗಳಾಗಿವೆ. ಮುಂದೆ ವಿವರಿಸಲಾಗಿದೆ.

ಸಾಧಕ ಮನುಷ್ಯನಲ್ಲಿಯ 'ದಶ–ಚಕ್ರ'ಗಳ ವಿಷಯದಲ್ಲಿ ಇನ್ನು ಅನೇಕ ಪ್ರಮುಖ ವಿಚಾರಗಳನ್ನು ಇಲ್ಲಿ ಪ್ರಸ್ತಾಪ ಮಾಡಬೇಕಾಗುತ್ತದೆ. ಈ ಸೃಷ್ಟಿಕಾರ್ಯದ ಮೊದಲಿನಿಂದಲೂ ಲಿಂಗತತ್ತ್ವ ಸ್ವರೂಪವಾದ "ಅಖಂಡ ಚೈತನ್ಯಾತ್ಮಕ ಶಕ್ತಿ'ಯು ಅನೇಕ ಮಜಲುಗಳ ವಿಕಾಸದಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದು; ಇಂದಿನ ಸ್ಥಿತಿಯ ವಿಕಾಸದ ಹಂತದಲ್ಲಿದೆ. ಈ ಇಂದಿನ ಹಂತದೆ ವಿಕಾಸದ ಸ್ಥಿತಿಯಲ್ಲಿನ ಸೃಷ್ಟಿಯ ಭಾಗವಾಗಿ ಸಾಧಕ

ಮನುಷ್ಯನೂ ಸಹ ಇದ್ದಾನೆ. ಇಲ್ಲಿ ಈ ಸಾಧಕ ಮನುಷ್ಯನ ದೇಹದಲ್ಲಿ 'ದಶ–ಚಕ್ರ'ಗಳ ಸ್ವರೂಪದಲ್ಲಿ ಈ ಎಲ್ಲಾ ವಿಕಾಸದ ಹಂತಗಳು ಜೀವಂತ ಪಳೆಯುಳಿಕೆಗಳಾಗಿ (Active fossil system) ಅಸ್ಥಿತ್ವದಲ್ಲಿದೆ. ಅದೂ ಅಲ್ಲದೆ ಈ ವಿಕಾಸವು ಇದೇ ರೀತಿಯಲ್ಲಿ ಮುಂದುವರೆದರೆ; ಕಾಲಾಂತರದಲ್ಲಿ ಈ ಸೃಷ್ಟಿಯಲ್ಲಿನ ಪ್ರತಿಯೊಂದೂ "ವಸ್ತು; ಜೀವಿಗಳೆಲ್ಲಾ ಮೊದಲನೆ ಅಖಂಡ ಚೈತನ್ಯಾತ್ಮಕ ಶಕ್ತಿ ಸ್ವರೂಪವಾಗಿಯೇ ಅಸ್ಥಿತ್ವದಲ್ಲಿದ್ದು, ಮೂಲ ಸ್ಥಿತಿಗೇ ಮರಳುತ್ತದೆ ಎಂಬುದು ವೈಜ್ಞಾನಿಕ ವಿಶ್ಲೇಷಣೆಯೂ ಹೌದು, ಆಧ್ಯಾತ್ಮಿಕ ವಿಚಾರವೂ ಹೌದು. ಆದರೆ ಇಂದಿನ ಸಾಧಕ ಮನುಷ್ಯನು ಈಗಲೇ "ಆ ಅಖಂಡ ಚೈತನ್ಯತ್ಮಕ ಶಕ್ತಿ ಸ್ವರೂಪಿಯಾಗಬಹುದಾದ ಸಂದರ್ಭವನ್ನು ಹೊಂದಿದ್ದಾನೆ. ಕಾರಣ ತನ್ನಲ್ಲೇ ಅಸ್ಥಿತ್ವದಲ್ಲಿರುವ 'ದಶ–ಚಕ್ರ' ಸ್ವರೂಪದ ಪಳೆಯುಳಿಕೆಗಳಲ್ಲಿನ ಜೀವಂತವಾದ ಸೃಷ್ಟಿಕ್ರಮದ ಅನುಭವ ಮಾಡಿಕೊಂಡರೆ, ಈ, ಜೀವಿಯು ಈಗಲೇ ತತ್‌ಕ್ಷಣ ಆ ಅಖಂಡ ಚೈತನ್ಯಾತ್ಮಕ ಶಕ್ತಿ'ಯ ಸ್ವರೂಪಿಯೇ ಆಗಬಹುದಾದ ಸಂದರ್ಭಗಳಿವೆ. ಇದನ್ನೇ "ದೈವ ಸಾಕ್ಷಾತ್ಕಾರ", "ಮುಕ್ತಿ", ಮತ್ತು "ಲಿಂಗಾಂಗ ಸಾಮರಸ್ಯ" ಮುಂತಾದ ಪದಗಳಿಂದ ತಿಳಿಸಲಾಗಿದೆ. 'ಲಿಂಗ'ವೆಂದರೆ ಲಿಂಗತತ್ತ್ವ ತನ್ನ ದೇಹದಲ್ಲಿದೆ ಎಂದು ಯಾರು ತಿಳಿಯುತ್ತಾರೆಯೋ ಅವರ ದೇಹ 'ಲಿಂಗ'ವಾಗಿದೆ. ಅಂತಹ ತಿಳಿವಳಿಕೆಯಿಂದ ಲಿಂಗದಲ್ಲಿನ ಆ ಲಿಂಗತತ್ತ್ವದ ಇರುವಿಕೆಯನ್ನು ತಿಳಿದು ಅದೇ ಸ್ವರೂಪವೇ ಆಗುವುದೇ 'ಲಿಂಗಾಂಗ ಸಾಮರಸ್ಯ'ವಾಗಿದೆ. ಆದರೆ ಲಿಂಗದಲ್ಲಿ ಆ ಲಿಂಗತತ್ತ್ವದ ಇರುವಿಕೆಯನ್ನು ತಿಳಿದು ಆ "ಲಿಂಗತತ್ತ್ವ ಸ್ವರೂಪಿ" ಆಗುವುದೇ ಷಟ್ ಸ್ಥಲ ಸಿದ್ಧಾಂತದ ಗುರಿಯಾಗಿದ್ದು; ಆ ಷಟ್‌ಸ್ಥಲ ಸಿದ್ಧಾಂತದ ವಿವರಣೆಗಳನ್ನು ವಿವರವಾಗಿ 101 ಸ್ಥಲ ಕ್ರಮದಲ್ಲಿ ಶಾಸ್ತ್ರವಾಗಿ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥ ನಿರೂಪಿಸಿದರೆ, ಅದೇ

'ಷಟ್‌ಸ್ಥಲ ಸಿದ್ಧಾಂತ'ದ ಆಚಾರಣೆಯನ್ನು ಮಾಡಿ, ಅನುಭಾವ ಮಾಡಿಕೊಂಡು, "ಅನುಭಾವ"ಗಳನ್ನು "ಪಂಚಾಚಾರ ಸ್ಥಲ"ದ ನೆಲೆಯಲ್ಲಿ ಬಸವಾದಿ ಶರಣರ ವಚನ ವಾಙ್ಮಯವು ಪ್ರತಿಪಾದಿಸುತ್ತದೆ. ಆದರೆ ಬಸವಾದ ಶರಣರಿಗೆ ಶ್ರೀ ಸಿದ್ಧಾಂತ ಶಿಖಾಮಣಿ ನಿರೂಪಿತ 'ಷಟ್ ಸ್ಥಲ ಸಿದ್ಧಾಂತ'ದ ಪರಿಚಯವಿರಲಿಲ್ಲ; ಆದರೆ, ಇದೇ ಷಟ್‌ಸ್ಥಲ ಸಿದ್ಧಾಂತದ ವಿಚಾರಗಳ ವಿವರಗಳು 28 ಶಿವಾಗಯಗಳ ಸಂಪ್ರದಾಯದಲ್ಲಿನ ಆಚರಣೆಗಳ ಮೂಲಕವಾಗಿಯೂ ಹಾಗೂ ನೇರವಾಗಿ ಆಗಮನಗಳಿಂದಲೇ ತಿಳಿದಿರಬಹುದು. ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥ ರಚನೆಯನ್ನು ಮಾಡುವಾಗ ಶ್ರೀ ಶಿವಯೋಗಿ ಶಿವಾಚಾರ್ಯರು ತಾವು "ಆದರ ಪೂರ್ವಕವಾಗಿ (ಸಾದರಂ) ಕಾಮಿಕಾದಿ ವಾತು ಲಾಂತವಾದ ಶೈವ ತಂತ್ರಗಳನ್ನು (ಆಗಮಗಳನ್ನು) ಮತ್ತು ಶಿವಸಂಬಂಧಿಯಾದ ಎಲ್ಲ ಪುರಾಣಗಳನ್ನು ಅವಲೋಕನ ಮಾಡಿ (ಪರಿಶೀಲಿಸಿ); ವೇದ ಮಾರ್ಗಗಳಿಗೆ ವಿರೋಧವಿಲ್ಲದ ಹಾಗೆ ವಿಶಿಷ್ಟವಾದ ಆಚಾರ ಸಿದ್ಧಿಗಾಗಿ ಅಸನ್ಮಾರ್ಗಗಳ ನಿರಸನಕ್ಕೆ (ಬಿಡಲು) ವಿವೇಕಿಗಳ ಪ್ರಮೋದಕ್ಕಾಗಿ (ಸಂತೋಷಕ್ಕಾಗಿ) ತಾವು ಈ ಗ್ರಂಥ ರಚನೆಯನ್ನು ಮಾಡುವುದಾಗಿ ಹೇಳಿಕೊಂಡಿದ್ದಾರೆ. (ಸಿ.ಶಿ 1–25, 26, ಈ ರೀತಿಯಲ್ಲಿ ಕಾಮಿಕಾದಿ ವಾತುಲಾಂತ್ಯವಾದ ಆಗಮಗಳಲ್ಲಿನ ವಿಚಾರಗಳನ್ನು ಶಾಸ್ತ್ರ ಸ್ವರೂಪದಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವು ಪ್ರತಿಪಾದಿಸಿದರೆ, ಅದೇ ಆಗಮಗಳಲ್ಲಿನ ವಿಚಾರಗಳನ್ನು ಸಂಪ್ರದಾಯದಲ್ಲಿ ತಿಳಿದು ಆಚರಿಸಿ ಅನುಭಾವ ಮಾಡಿಕೊಂಡು ತಮ್ಮ ಅನುಭಾವಗಳನ್ನು ನಿರೂಪಿಸಿರುವುದೇ ಬಸವಾದಿ ಶರಣರ ವಚನ ವಾಙ್ಮಯವಾಗಿದೆ.

ಅಲೋಕ್ಯ / ಶೈವತಂತ್ರಾಣಿ / ಕಾಮಿಕಾತ್ಯಾನಿ / ಸಾದರಮ್ ।
ವಾತುಲಾಹಿತಾನಿ / ಶೈವಾನಿ / ಪುರಾಣಾನ್ಯಚಿಲಾಬಿ/ತು/॥ ಸಿಶಿ (1–25)
ವೇದಮಾರ್ಗ ವಿರೋಧ್‌ನ / ಪಿಶಿಷ್ಟಾಚಾರ ಸಿದ್ದಯೇ / ।

ಆದ್ದರಿಂದ 28 ಶಿವಾಗಮಗಳೇ ಮೂಲದಲ್ಲಿ ಶಾಸ್ತ್ರ ಹಾಗೂ ಅನುಭಾವಗಳಿಗೆ ಆಧಾರವಾಗಿದೆ. ಇನ್ನು ಈ "ದಶ–ಚಕ್ರ'ಗಳ ಚಿಂತನೆಗಳೇ 'ಶಾಸ್ತ್ರ' ಹಾಗೂ 'ಅನುಭಾವ'ಗಳಲ್ಲಿರುವ ವಿಚಾರಗಳನ್ನು ಏಕ ಮುಖವಾಗಿ ತಿಳಿದು, ಆಪರಿಬ, ಅನುಭಾವ ಮಾಡಿಕೊಳ್ಳಲು ಅನುಕೂಲಮಾಡಿಕೊಡುತ್ತದೆ. ಕಾರಣ, ಲಿಂಗತತ್ತ್ವದ ವಿಚಾರಗಳು; 36 ತತ್ತ್ವಗಳು, ಪೌರಾಣಿಕ ಹೆಸರುಗಳ ಸಾಂಕೇತಿಕ ಗುರುಧರ್ಮಗಳ ಚಿಂತನೆಗಳು, ಪ್ರಜ್ಞಾ ವಿಶೇಷಗಳು; ಷಟ್‌ಸ್ಥಲ ಸಿದ್ಧಾಂತದ ಅನ್ವಯಗಳು; ಇವೆಲ್ಲವನ್ನು ಏಕೀಕರಿಸಿ, ಅರ್ಥೈಸಿ, ಅನುಭವ ಮಾಡಿಕೊಳ್ಳಲು ಈ 'ದಶ–ಚಕ್ರ'ದ ವಿವರಗಳು ಪ್ರಯೋಜನಕಾರಿಯಾಗಿದೆ. ಈ ದಶ–ಚಕ್ರಗಳ ಹಿನ್ನೆಲೆಗಳಲ್ಲಿನ ಎಲ್ಲಾ ವಿವರಗಳು ತಂತ್ರಶಾಸ್ತ್ರದ ಗ್ರಂಥಗಳಲ್ಲಿ ದೊರಕುತ್ತದೆ. ಹಾಗೂ ವಿಶೇಷವಾಗಿ **`chakras' Harish johri;** ಲಲಿತಾಸಹಸ್ರನಾಮ, ಸೌಂದರ್ಯ ಲಹರಿ ಮುಂತಾದ ಗ್ರಂಥ ಹಾಗೂ ಸ್ತೋತ್ರಗಳಲ್ಲಿ ದೊರಕುತ್ತದೆ. ಇವೆಲ್ಲಾ ವಿಚಾರಗಳನ್ನು ಉಪಯೋಗಿಸಿಕೊಂಡು 'ಷಟ್‌ಸ್ಥಲ ಸಿದ್ಧಾಂತ' ತನ್ನ ಎಲ್ಲಾ ವಿವರಗಳನ್ನು; ಸಾಧನ ಮಾರ್ಗಗಳನ್ನು ನಿರೂಪಿಸುತ್ತದೆ. ಲಲಿತಾ ಸಹಸ್ರನಾಮದ ಮೇಲೆ ಬರೆದಿರುವ ಭಾಸ್ಕರಾಯನ ವ್ಯಾಖ್ಯಾನ ಅನೇಕ ವಿಚಾರಗಳನ್ನು ಈ 'ದಶ–ಚಕ್ರ'ಗಳ ವಿಚಾರದಲ್ಲಿ ಮಾಹಿತಿಗಳನ್ನು ಒದಗಿಸುತ್ತದೆ. **Sir John wood roffe** ಅವರು ಬರೆದಿರುವ **seaport power; principles of Toutre,** ಇತ್ಯಾದಿ ಗ್ರಂಥಗಳು ಅನೇಕ **supreme** (ಪರ) 64 ಬೈರವಶಾಸ್ತ್ರ ಆಗಮನಳು; ರುದ್ರಶಾಸ್ತ್ರ (ಪರಾಪರ)

28 ಶಿವಾಗಮಗಳ ಹೆಸರುಗಳು; ಕಾಮಿಕಾಗಮ, ಯೋಗಜಾಗಮ ಚಿಕತ್ಯಾಗಮ, ಕಾರದಾಗಮ, ಅಜಿತಾಗಮ, ದೀಪ್ತಾಗಮ ಸೂಕ್ಷಾಗಮ, ಸಹಸ್ರಾಗಮ, ಅಂಶುಮನಾಗಮ, ಸುಪ್ರಭೇದಾಗಮ (ಹತ್ತು ಶಿವಾದಮಗಳು, ವಿಜಯಾಗಮ, ನಿಶ್ವಾಸಾಗಮ, ಸ್ವಯಂಭುವಾಗದು, ಅನಿಲಾಗಮ, ವೀರಾಗಮ, ತಾರವಾಗದು, ಮಕುಟಾಗಮ, ವಿಮಲಾಗಮ, ಚಂದ್ರ–ಜ್ಞಾನಾದದು, ಬಿಂಬಾಗಮ, ಪ್ರೊದ್ಗೀತಾಗದು ಲಲಿತಾಗಮ, ಸಿದ್ಧಾಗಮ, ಸಂತಾನಾಗದು, ಶಿರ್ವೋಕ್ತಾಗಮ, ಪಾರಮೇಶ್ವರಾಗಮ, ಕಿರಣಾಗಮ, ವಾತ್ಲುಲಾಗಮ" (ಹದಿನೆಂಟು ರುದ್ರಾಗಮಗಳು)

ಇಂದಿಗೆ ಇವು ಭಾಗಶ: ಇಲ್ಲಿ ಎಲ್ಲಾ ನಾಲ್ಕು ಭಾಗಗಳು ದೊರಕುತ್ತವೆ. ಬಾಕಿಯದು ಇಂಟಗ್ ದೊರೆಯುತ್ತಿಲ್ಲ. ವಾಸ್ತವದಲ್ಲಿ ಈ ಆಗಮಗಳಿದ್ದು, ಅದರಲ್ಲಿ ಮೊದಲ 64 ಭೆಗವಾತ್ಮಕವಾಗಿದ್ದು, ನಂತರ 28 ಆಗಮನಗಳಿವೆ. ಭೈರವಶಾಸ್ತ್ರ; ಪರವಾಗಿದ್ದು, 10 ಶಿವಾಗಮಗಳು' ಅಪರವಾಗಿದ್ದು 8 ರುದ್ರಾಗಮಗಳು' ಪರಾಪರಗಳಾಗಿವೆ.

ಉಪಯುಕ್ತ ಮಾಹಿತಿಗಳನ್ನು 'ದಶ–ಚಕ್ರ'ಗಳ ಬಗೆಗೆ ಕೊಡುತ್ತದೆ. ಅರವಿಂದ ಘೋಷರ 'ಪೂರ್ಣಯೋಗ' ಮಾಹಿತಿಯ ಹಿನ್ನೆಲೆಯಲ್ಲಿ 'ದಶ–ಚಕ್ರ'ಗಳ ವಿವರಗಳು ದೊರಕುತ್ತದೆ. ಬಸವಾದಿಕರಣದ ವಚನವಾಙ್ಮಯವು ಈ ಎಲ್ಲಾ ಮಾಹಿತಿಗಳಿಗಿಂತ 'ದಶ–ಚಕ್ರ'ಗಳ ವಿಚಾರದಲ್ಲಿ ಖಚಿತವಾದ ಮಾರ್ಗದರ್ಶನವನ್ನು ಸಾಧನೆಯ ಪರವಾಗಿ ಒದಗಿಸುತ್ತದೆ. ಅಕ್ಕಮಹಾದೇವಿ, ಅಲ್ಲಮಪ್ರಭು, ಬಾಲಸಂಗಯ್ಯ ಸಕಲಾಗಮ ಶಿಖಾಮಣಿ

ಮುಂತಾದ ಶರಣರ ವಚನಗಳು, ಸಾಧಕರಿಗೆ ಅನಿವಾರ್ಯದ ಸಾಧನ ಮಾರ್ಗದ ಅನೇಕ 'ಗುಟ್ಟು'ಗಳನ್ನು ವಿವರವಾಗಿ ವಿವರಿಸುತ್ತವೆ. ಇದು ಅಪಾರವಾದ ಸಾಹಿತ್ಯವಾಗಿದ್ದ ಶ್ರೀ ಸಿದ್ಧಾಂತ ಶಿಖಾಮಣಿ ಹಾಗೂ ಬಸವಾದಿ ಶರಣರ ವಚನ ವಾಙ್ಮಯ ಇವೆರಡೂ ಇಷ್ಟ ಲಿಂಗೋಪಾಸನೆಯ ಮೂಲದ, ಮಾಹಿತಿ, ಸಾಧನೆಗಳ ಮಾರ್ಗಗಳ ವಿಚಾರಗಳನ್ನು ಒಳಗೊಂಡಿದ್ದು; 'ಲಿಂಗಾಂಗ ಸಾಮರಸ್ಯ' ವಿದ್ಯೆಯ ಸಕಲ ವಿವರಗಳನ್ನು ಒಳಗೊಂಡು ಒಂದಕ್ಕೊಂದು ಪೂರಕವಾದ ಸಾಹಿತ್ಯವಾಗಿದೆ. (ತಾಂತ್ರಿಕ ಸಾಹಿತ್ಯ; **Technical literature)** ಈ ಹಿನ್ನೆಲೆಗಳಲ್ಲಿ 'ದಶ-ಚಕ್ರಗಳ ಕೆಲವು ವಿವರಣೆಗಳನ್ನು ಇಲ್ಲಿ ಕೊಡಲಾಗಿದೆ. ಈ ವಿಚಾರಗಳು ಅತ್ಯಂತ ಸಂಗ್ರಹ ಸ್ವರೂಪದಲ್ಲಿದ್ದು, ಈ ಪ್ರಬಂಧದ ವಿಚಾರಗಳಲ್ಲಿನ ಮಾಹಿತಿಗಳಿಗೆ ಪೂರಕವಾಗಿರುತ್ತದೆ. (1) ಆಧಾರ ಚಕ್ರ: ಸೃಷ್ಟಿಕ್ರಮದಲ್ಲಿ ಕೊನೆಯ ಚಕ್ರ; ಆದರೆ ನಿವೃತ್ತಿ, ಮೋಕ್ಷ ಮಾರ್ಗದಲ್ಲಿ ಮೊದಲನೆಯ ಚಕ್ರವಗಿದೆ. ವೀರಶೈವ ಧರ್ಮದಲ್ಲಿನ ಶಿವಯೋಗ ಸಾಧನೆಯಲ್ಲಿ ಎಲ್ಲಾ ದಶ-ಚಕ್ರಗಳನ್ನು ಲಿಂಗತತ್ತ್ವ ಸ್ವರೂಪವಾಗಿಯೇ ಕಾಣುವ ಪದ್ಧತಿ ಇರುವುದರಿಂದ, ದಶಚಕ್ರದಲ್ಲಿನ ಪ್ರತಿಯೊಂದು ಚಕ್ರಕ್ಕೂ ಒಂದಕ್ಕೊಂದು ಸಂಬಂಧವಿದೆ. ಈ ದೃಷ್ಟಿಯಿಂದ ಆಧಾರ ಚಕ್ರಕ್ಕೂ, ಮತ್ತು ಅದರ ಮೇಲಿನ ಎಲ್ಲಾ ಚಕ್ರಗಳಿಗೂ ಸಂಬಂಧವಿರುತ್ತದೆ. ಅಂದರೆ, ಅಣುಚಕ್ರವೇ ಅದರ ಕೆಳಗಿನ ಎಲ್ಲಾ ಚಕ್ರ ಸ್ವರೂಪಗಳಾಗಿ ಸೃಷ್ಟಿ ಕಾರ್ಯದಲ್ಲಿ ಪ್ರವೃತ್ತವಾಗಿದ್ದರೆ; ಅದೇ ನಿವೃತ್ತಿ ಮಾರ್ಗದಲ್ಲಿ (ಮೋಕ್ಷ ಮಾರ್ಗ, **liberation,** ಲಿಂಗಾಂಗ ಸಾಮರಸ್ಯ ಮಾರ್ಗದಲ್ಲಿ) ಆಧಾರ ಚಕ್ರದಿಂದ ಹಂತ ಹಂತವಾಗಿ ಸಾಧಿಸುತ್ತಾ ಉತ್ತಮಗತಿ **(Higher & Higher Conscious states)** ಯನ್ನು ಹೊಂದುತ್ತಾ ಹೆಚ್ಚಿನ ಮಟ್ಟದ 'ಲಿಂಗತತ್ತ್ವ'ದ ಅರಿವನ್ನು ಪಡೆಯುತ್ತಾ ಸಾಧಕನು ಹೋಗುತ್ತಾನೆ. ಆಧಾರ ಚಕ್ರದಿಂದ ಮೇಲಿನ ಚಕ್ರಗಳ ಸಾಧನೆಯನ್ನು ಮಾಡುತ್ತಾ ಮಾಡುತ್ತಾ ಸಾಧಕನು ಹೆಚ್ಚು ಹೆಚ್ಚು ಲಿಂಗತತ್ತ್ವ ಸ್ವರೂಪಿಯಾಗುತ್ತಾನೆ. ಈ ವಿಚಾರವನ್ನು ಸಾಂಕೇತಿಕವಾಗಿ, ಆಧಾರ ಚಕ್ರದಲ್ಲಿ ಲಿಂಗವನ್ನು ಸ್ವಲ್ಪ ತೋರಿಸಿ, ಅನಾಹುತ ಚಕ್ರದಲ್ಲಿ ಸ್ವಲ್ಪ ದೊಡ್ಡದಾಗಿ ತೋರಿಸಿ, ಅಜ್ಞಾ ಚಕ್ರದಲ್ಲಿ ಅತ್ಯಂತ ಸ್ಫುಟವಾಗಿ ದೊಡ್ಡದಾಗಿ ತೋರಿಸಲಾಗಿದೆ. ಅಜ್ಞಾ ಚಕ್ರದಲ್ಲಿ ಕೇವಲ ಅಖಂಡ ಚೈತನ್ಯಾತ್ಮಕ ಶಕ್ತಿ ಸ್ವರೂಪದ 'ಶಿವ-ಶಕ್ತಿ' ತತ್ತ್ವಗಳು ಮಾತ್ರವಿದ್ದು, ಈ ಸ್ಥಿತಿಯನ್ನು ಸಾಂಕೇತಿಕವಾಗಿ, "ಅರ್ಧನಾರೀಶ್ವರ" ತತ್ತ್ವವಾಗಿ ಗ್ರಹಿಸಲಾಗಿದೆ. ಈ 'ಶಿವ-ಶಕ್ತಿ' ಸ್ವರೂಪವು 'ಚೈತನ್ಯಾತ್ಮಕ ಶಕ್ತಿ'ಯಾಗಿದ್ದು, ಶಿವ ಮತ್ತು ಶಕ್ತಿ ತತ್ತ್ವಗಳು ಯಾವಾಗಲೂ ನಿರಂತರವಾಗಿ ಎಲ್ಲಾ ಸ್ಥಿತಿಗಳಲ್ಲಿ (ದಶ-ಚಕ್ರಗಳಲ್ಲಿ) 'ಅವಿನಾಭಾವ' ಸಂಬಂಧದಿಂದ ಒಟ್ಟಿಗೆ ಇರುತ್ತದೆ. ಲಿಂಗತತ್ತ್ವದ ಸ್ವರೂಪವು ಅಜ್ಞಾ ಚಕ್ರದಿಂದ ಕೆಳಗೆ ಬಂದ ಹಾಗೆಲ್ಲಾ, ಅದು "ಕಲುಷಿತ'ಗೊಂಡ ಸ್ಥಿತಿಗಳಾಗಿದ್ದು, 'ಅವಿದ್ಯಾ'ಸ್ವರೂಪವು ಹೆಚ್ಚಾಗುತ್ತಾ ಹೋಗುತ್ತದೆ. (36 ತತ್ತ್ವಗಳಲ್ಲಿ ಅವಿದ್ಯಾ ತತ್ತ್ವವು 10ನೆಯ ತತ್ತ್ವವಾಗಿದೆ.) ಆಧಾರ ಚಕ್ರದಲ್ಲಿ ಅತ್ಯಂತ ಪ್ರಾಪಂಚಿಕ ಗುಣಧರ್ಮಗಳನ್ನು ಹೊಂದಿದ್ದು; ಆಧಾರ ಚಕ್ರ ಸ್ವರೂಪಿ ವ್ಯಕ್ತಿಯು ಕೇವಲ ನಿದ್ರಾ, ಮೈಥುನ, ಹಸಿವೆಗಳ ಒತ್ತಾಯಗಳಿಗೆ ಸಿಲುಕಿ, ಅದಕ್ಕಿಂತ ಹೆಚ್ಚಿನ ಯಾವುದೇ ಕ್ರಿಯೆಗಳಲ್ಲಿ ತೊಡಗಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಪ್ರತಿಯೊಂದು ಚಕ್ರದಲ್ಲೂ ಸಾಂಕೇತಿಕವಾಗಿ ಒಂದು ಪುರುಷ ದೇವತೆ, ಒಂದು ಸ್ತ್ರೀ ದೇವತೆ, ಹಾಗೂ ಒಂದು ಪ್ರಾಣಿಯನ್ನು ಸಾಂಕೇತಿಕವಾಗಿ ತೋರಿಸಲಾಗಿದೆ. ಇದರ ಅರ್ಥ ಸಾಧಕನು ಆಯಾ ಚಕ್ರಗಳ ಗುಣಧರ್ಮಗಳ ಅನುಸಾರವಾಗಿ, ಪುರುಷ (ಗಂಡಸತ್ವ); ಸ್ತ್ರೀ (ಹೆಣ್ಣತ್ವ) ಹಾಗೂ ಪ್ರಾಣಿ **(Animal quality,** ಪ್ರಾಣಿಗುಣ)ಯನ್ನು ಸಾಂಕೇತಿಕವಾಗಿ ನಿರೂಪಿಸಲಾಗುತ್ತದೆ. ಹೀಗೆ ಆಧಾರ ಚಕ್ರದಲ್ಲಿ ಪುರುಷದೇವ ಬಾಲ ಬ್ರಹ್ಮನನ್ನು; ಸ್ತ್ರೀ ದೇವತೆಯಾಗಿ ಡಾಕಿನಿ ಶಕ್ತಿಯನ್ನು; ಆನೆಯನ್ನು ಏಳು ಸೊಂಡಿಲು ಇರುವಂತೆ ಪ್ರಾಣೀಯನ್ನಾಗಿ ಸಾಂಕೇತಿಕವಾಗಿ ತಿಳಿಯಲು ಸಾಧ್ಯವಾಗುತ್ತದೆ. ವೀರಶೈವ ಧರ್ಮದಲ್ಲಿ ಈ 'ಡಾಕಿನೀ ಶಕ್ತಿ'ಯ ಬದಲಾಗಿ 'ಕ್ರಿಯಾಶಕ್ತಿ'ಯನ್ನು ಆಧಾರ ಚಕ್ರದಲ್ಲಿ ಅನ್ವಯ ಮಾಡಲಾಗಿದೆ. ಇಲ್ಲಿ 'ಶಕ್ತಿ'ಯ

ಹೆಸರುಗಳು ಮುಖ್ಯವಲ್ಲ. ಅದು 'ಶಕ್ತಿ' ಸ್ವರೂಪದಲಿದೆ ಎಂಬುದಷ್ಟೇ ಮುಖ್ಯ: ಇವೆಲ್ಲಾ ವಿಚಾರಗಳು ಸಾಂಕೇತಿಕ ಅರ್ಥಗಳನ್ನು ಹೊಂದಿದ್ದು; ಅದು ಆಧಾರ ಚಕ್ರದ ಗುಣ ವಿಶೇಷಗಳನ್ನು; 'ಕಾರ್ಯ ವಿಶೇಷ'ಗಳನ್ನು ಪ್ರತಿ ಪಾದಿಸುತ್ತದೆ. ಆಧರ ಚಕ್ರದ ಅಧಿಪತಿ ವಿನಾಯಕ ಅಥವಾ ಗಣೇಶನಾಗಿದ್ದಾನೆ. ಅವನನ್ನು ಆನೆಯೆಂದು ಸಂಕೇತಿಸಲಾಗಿದೆ. ಆ ಆನೆಯ ಏಳು ಸೊಂಡಲುಗಳು ಅಂದರೆ, ಐರಾವತ ಆನೆಯ ಏಳು ಸೋಮಡಲುಗಳು ಪ್ರಾಕೃತಿಕ ಏಳು ಮನುಷ್ಯ ಸಂಬಂಧಿತ ವಿಚಾರಗಳನ್ನು ಪ್ರತಿಪಾದಿಸುತ್ತದೆ (1) ಶಬ್ಧ (2) ಸ್ಪರ್ಶ (3) ರೂಪ (4) ರಸ (5) ಗಂಧ (6) ಉಸಸ್ಥ **(secretion or Defecation)** (7) **Sex (Genitals)** ಹೀಗೆಯೇ ಸಪ್ತ ಧಾತುಗಳಿಂದ ಸಾಧಕ ಮನುಷ್ಯನ ದೇಹ ಮಾಡಲ್ಪಟ್ಟಿದೆ. ಸಪ್ತ ಧಾತುಗಳು (1) ರಜ **(clay)** (2) ರಸ **(flimsies)** (3) ರಕ್ತ **(blood)** (4) ಮಾಂಸ **(flesh, nerve fibers bissues)** (5) ಮೇಧ **(Fat)** (6) ಅಸ್ತಿ **(bone)** (7) ಮಜ್ಜ **(bone marrow) the seven A rinks** ಏಳು ಸೊಂಡಲುಗಳೂ ಏಳು ರೀತಿಯ ಮನುಷ್ಯ: ಆಸೆಗಳನ್ನು **(desires)** ಪ್ರತಿಪಾದಿಸುತ್ತವೆ. **(Security, procreation longevity, sharing, knowledge, self-realization, and union)**ಈ ಏಳು ಸೊಂಡಲುಗಳು ಏಳು ಪ್ರಮುಖ ಚಕ್ರಗಳನ್ನು ಪ್ರತಿಪಾದಿಸುತ್ತವೆ. (ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹುತ, ವಿಶುದ್ಧಿ, ಅಜ್ಞಾ ಹಾಗೂ ಸಹಸ್ರಾರ, ಶಿಖಾ, ಪಶ್ಚಿಮ, ಅಣು ಚಕ್ರಗಳು ಸಹಸ್ರದ ಭೇದಗಳೇ ಆಗಿವೆ). ಕುಂಡಲಿನಿ ಶಕ್ತಿಯು ಈ ಆಧಾರ ಚಕ್ರದಲ್ಲಿನ ಸ್ವಯಂಭು (ಹಳದಿ ಬಣ್ಣದ) ಲಿಂಗಕ್ಕೆ **3 ½** ಸುತ್ತು ಸರ್ಪದಂತೆ ಸುತ್ತುಹಾಕಿಕೊಂಡಿರುತ್ತದೆ. ಇದರ ಜಾಗ್ರತವಾದರೆ, ಆ ಕುಂಡಲಿನಿ ಶಕ್ತಿಯು ಸಹಸ್ರಾರ ಚಕ್ರದವರೆವಿಗೆ ಸುಷುನ್ನು ನಾಳದಲ್ಲಿ ಪ್ರವಹಿಸುತ್ತದೆ. ಇವೂ ಅಲ್ಲದೆ ಇದೇ ಆಧಾರದ ಸ್ಥಾನದಿಂದ ಸುಷಮ್ನಾನಾಳದ ಎಡ ಮತ್ತು ಬಲ ಬದಿಯಲ್ಲಿ ಮುಂದಿನ ಹೊಳ್ಳೆಯವರೆಗೆ, **crisscross** ಆಗಿ ಇಡಾ ಮತ್ತು ಮಂಗಳ ನಾಡಿಗಳು ಊರ್ಧ್ವ ಮುಖವಾಗಿ ಹೋಗಿವೆ ಈ ಇಡಾ ಮಂಗಳ ನಾಡಿಗಳ ಮೂಲಕವೇ ಮನುಷ್ಯನು ತನ್ನ ಉಸಿರಾಟವನ್ನು ಮಾಡುತ್ತಾನೆ. ಈ ಸುಷುಮ್ನೊ; ಎಡಾ, ಪಿಂಗಳ ನಾಡಿಗಳ ಅಸ್ಥಿತ್ವ; ಅವುಗಳ ಕೆಲಸ ಕಾರ್ಯಗಳ ಬಗೆಗೆ, ವಿಷಯವಾಗಿ ತಂತ್ರ ಶಾಸ್ತ್ರದ ಗ್ರಂಥಗಳಲ್ಲಿ ವಿವರಿಸಲಾಗಿದೆ. ಶ್ರೀತತ್ತ್ವ ಚಿಂತಾಮಣಿ ಗ್ರಂಥದಲ್ಲಿ "ಷಟ್ ಚಕ್ರ–ನಿರೂಪಣೆ"ಯಾಗಿ 55 ಶ್ಲೋಕಗಳಲ್ಲಿ ವಿವರವಾಗಿ ನಿರೂಪಿಸಲಾಗಿದೆ. ಈ ಎಲ್ಲಾ ವಿವರಣೆಗಳು **Sir John wood rofee** ಅವರ **serpent power** ಗ್ರಂಥದಲ್ಲಿ ಪುಟ **317**ರಿಂದ **479**ರವರೆಗೆ ವಿವರವಾಗಿ ಪ್ರತಿಪಾದಿಸಲಾಗಿದೆ. 'ಕುಂಡಲಿನಿಯೋಗ' ಷಟ್‌ಚಕ್ರ ಭೇದ ಪ್ರಕ್ರಿಯೆಗಳು ವೀರಶೈವ ಧರ್ಮದಲ್ಲಿ 'ಶಿವಯೋಗ'ದ ಒಂದು ಭಾಗವಾದಿ ಆಚರಿಸುವ ಒಂದು ಪ್ರಕ್ರಿಯೆಯಾಗಿದೆ. ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಇದ್ದರೆ ಸಂಕ್ಷಿಪ್ತವಾದ ವಿವರಣೆಗಳಿದ್ದರೂ (ಶಾಸ್ತ್ರ ಸ್ವರೂಪದಲ್ಲಿ) ಸಹ ಬಸವಾದಿ ಶರಣರ ವಚನ ವಾಙ್ಮಯದಲ್ಲಿ ಅನಂತ ರೀತಿಯ ಅನುಭಾವತ್ಮಕ ವಿವರಣೆಗಳೊಂದಿಗೆ ಅದು ದೊರಕುತ್ತದೆ. ಆಧಾರ ಚಕ್ರವು ಪೃಥ್ವಿ ತತ್ತ್ವವನ್ನು ಹೊಂದಿದೆ. ಹಳದಿ ಬಣ್ಣದ ಪ್ರಾಮುಖ್ಯತೆ. ಆಹಾರ ಮತ್ತು ಮನೆಗಳ ಚಿಂತನೆಗಳು ಪ್ರಮುಖವಾದ ವಿಚಾರಗಳಾಗಿದೆ. ಚೌಕಾಕಾರದ ಆಕೃತಿ ಪ್ರಧಾನ; ನಾಲ್ಕು ದಳ ಕಮಲ; 'ಲಂ'ಕಾರ ಬೀಜಾಕ್ಷರ ಮಂತ್ರ ವಂ, ಶಂ, ಷಂ, ಸಂ; ನಾಲ್ಕು ದಳ ಕಮಲಗಳ ಬೀಜಾಕ್ಷರಗಳು. ಆಧಾರ ಚಕ್ರದ ಮಧ್ಯದಲ್ಲಿ ಒಂದು 'ಸಂಯಂಭು" ಲಿಂಗವಿದೆ. ಲಿಂಗದ ಸುತ್ತು ಜೀವದ ಶಕ್ತಿಯಾದ ಕುಂಡಲಿನಿಯು ಸರ್ಪದ ಆಕಾರದಲ್ಲಿ ತನ್ನ **3 ½** ಸುತ್ತನ್ನು ಹಾಕಿಕೊಂಡು ತನ್ನ ಬಾಯಿಯಲ್ಲಿ ತನ್ನ ಬಾಲವನ್ನು ಇಟ್ಟುಕೊಂಡು ತನ್ನ ಹೆಡೆಯನ್ನು ಕೆಳ ಮುಖವಾಗಿ ಇಟ್ಟುಕೊಂಡಿರುತ್ತದೆ. ಕುಂಡಲಿನಿ ಜಾಗ್ರತವಾದ ಮೇಲೆ ಹೆಡೆಯು ಮೇಲ್ಮುಖವಾಗಿದ್ದು, ಅದು ಸುಷುಮ್ಮ ನಾಡಿಯಲ್ಲಿ ಪ್ರವೇಶವಾಗಲು

ತಯಾರಾಗಿರುತ್ತದೆ. ಈ ಇಡಾ, ಹಿಂಗಳ, ಸುಷುನ್ನೂ ನಾಡಿಗಳು ಒಂದಾಗಿ ಕೆಳಮುಖ ತ್ರಿಕೋಣವಾಗಿದ್ದು, ಸ್ವಯಂಭು ಲಿಂಗವು ಮಧ್ಯದಲ್ಲಿದೆ. ಈ ಸುಷನ್ನೂ ನಾಡಿಯಲ್ಲಿ ಏಕುಖ ಸಂಚಾರ, ದ್ವಿಮುಖ ಸಂಚಾರ ಮಾಹಿತಿಗಳು ಓಡಾಡುವ ವ್ಯವಸ್ಥೆಗಳಿದ್ದು, ಒಂದು ಚಕ್ರದಿಂದ ಮತ್ತೊಂದು ಚಕ್ರಕ್ಕೆ ಮಾಹಿತಿಗಳ ರವಾನೆಯಿದ್ದು; ಅದು ಸಾಧಕನ ಎಲ್ಲಾ ಕೆಲಸಗಳನ್ನು ಮಾಡಿಕೊಡುತ್ತದೆ. ಸಾಧಕನಿಗೆ ಮುಕ್ತಿ ಪಡೆಯುವ ಆಸೆ, ಈ ಆಧಾರದಿಂದ ಸಹಸ್ರಾರದವರೆವಿಗೆ ಇರುವ ಮಾಹಿತಿ ರವಾಯೆಯಿಂದ ಸಾಧ್ಯವಾಗುತ್ತದೆ. ಆಜ್ಞಾಚಕ್ರದಿಂದ ಆಧಾರದವರೆವಿಗೆ ಇರುವ ದ್ವಿಮುಖ ಸಂಚಾರ ಮಾಹಿತಿಯು ಆಧಾರ ಚಕ್ರದಿಂದ ಹೇಗೆ ಸಾಧಕನು ತನ್ನೆಲ್ಲಾ ಸಾಧನೆಗಳನ್ನು ಮಾಡಿಕೊಳ್ಳಬೇಕೆಂಬ ಮಾಹಿತಿಯು ಆಜ್ಞಾ ಚಕ್ರದಿಂದ ದೊರಕುತ್ತದೆ. ಚಿತ್ರ–6 ರಲ್ಲಿ ಸಪ್ತ ಚಕ್ರಗಳಲ್ಲಿನ ಎಲ್ಲಾ ಏಕಮುಖ – ದ್ವಿಮುಖ ಸಂಚಾರ ಸ್ವರೂಪ ಮಾಡಿ ಪ್ರವಾಹಗಳ ವಿಚಾರಗಳನ್ನು ಪ್ರತಿಪಾದಿಸಲಾಗಿದೆ. ಆಜ್ಞಾಚಕ್ರದಿಂದ ಆಧಾರ ಚಕ್ರಕ್ಕೆ ದೊರೆತ ಆಜ್ಞಾಗಳು ಸರಿಯಾಗಿ ಪಾಲಿಸದಿದ್ದರೆ, ಅದು ಆಜ್ಞಾಚಕ್ರಕ್ಕೆ ದೊರೆತ ಆಜ್ಞೆಗಳು ಸರಿಯಾಗಿ ಪಾಲಿಸದಿದ್ದರೆ, ಅದು ಆಜ್ಞಾಚಕ್ರಕ್ಕೆ ದೊರೆತು, ಆಧಾರ ಚಕ್ರದ ಕಾರ್ಯಗಳು ಸುಸೂತ್ರವಾಗಿ ನಡೆಯುವಂತೆ ಸಾಧ್ಯಮಾಡಿಕೊಡುತ್ತದೆ. (2) ಸ್ವಾಧಿಷ್ಟವ ಚಕ್ರ : ಈ ಚಕ್ರದ ಪುರಷದೇವತೆ ವಿಷ್ಣು: ಶಕ್ತಿ 'ರಾಕಿನಿ' ಅಥವಾ ವೀರಶೈವ ಷಟ್‌ಸ್ಥಲ ಸಿದ್ಧಾಂತ ಪ್ರಕಾರ 'ಜ್ಞಾನಶಕ್ತಿ'ಯಾಗಿದೆ. ಇದು ಸ್ತ್ರೀದೇವತೆ ಪ್ರಾಣಿ, ಮೊಸಳೆಯಾಗಿದೆ. ಬೀಜಾಕ್ಷರ "ವಂ"ಕಾರವಾಗಿದೆ. ಈ ಬೀಜಾಕ್ಷರವನ್ನು ಹೊರುವ ಪ್ರಾಣಿ ಮೊಸಳೆ. ಮೊಸಳೆಯು ಅನೇಕ ಗುಣ–ಧರ್ಮಗಳಿಂದ ಕೂಡಿದ್ದು, ಸ್ವಾಧಿಷ್ಠಾನ ಚಕ್ರ ಪ್ರಭಾವ ವ್ಯಕ್ತಿಯು ಮೊಸಳೆಯ ಗುಣಗಳಾದ, ಕಾಮಶಕ್ತಿ, ಕಲ್ಪನಾ ಶಕ್ತಿ; ಉತಾಮನಳ ಪ್ರಯೋಗ, ಸೂಕ್ಷ್ಮತೆ, ತೇಲುವಿಕೆ ಮುಂತಾದ ಗುಣಗಳನು ಹೊಂದಿರುತ್ತವೆ. ಈ ಚಕ್ರವು ಆ ದಳದ ಕಮಲವನ್ನು ಹೊಂದಿದೆ. ದಳಗಳ ಬೀಜಾಕ್ಷರಗಳು ಬ, ಭ, ಮ, ಯ, ರ, ಲ. ಅಕ್ಷರಗಳಾಗಿವೆ. ಪುರುಷ ದೇವತೆ ಹಾಗೂ ಸ್ತ್ರೀ ದೇವತೆಗಳು ದೈವೀಗುಣಗಳಾದ ಲಿಂಗತತ್ತ್ವದ ಗುರುಲಿಂಗ, ಜ್ಞಾನಶಕ್ತಿ

ಈ ವಿಚಾರಗಳು ಡಾ॥ ಎಸ್. ಆರ್. ಸಿದ್ದಲಿಂಗಲಿಂಗಪ್ಪನವರ ಸಂಶೋಧನೆಯಾಗಿದ್ದು: **'Deliverance of Mind through classic Music** ಎಂಬ ಸಂಶೋಧನಾತ್ಮಕ ಪ್ರಬಂಧದಲ್ಲಿ ಈ ವಿಚಾರಗಳನ್ನು ಪ್ರತಿಪಾದಿಸಲಾಗಿದೆ. ಆಧಾರದಿಂದ ಸಹಸ್ರಾರದವರೆವೆಗೆ ಏಕಮುಖ ಸಂಚಾರ ಮಾಹಿತಿ ಇರುವುದಲ್ಲದೆ, ಆಧಾರ ಚಕ್ರಕ್ಕೆ ಸ್ವಾಧಿಸ್ಟಾನದಿಂದ ಏಕಮುಖ ಸಂಚಾರ ಮಾಹಿತಿಯು ದ್ವಿಮುಖ ಸಂಚಾರವಾಗಿ 'ಆಜ್ಞಾ ಚಕ್ರ'ದಿಂದಲೂ ಚಕ್ರದಿಂದಲೂ ಮಾಹಿತಿ ಸಂಚಾರವಿದೆ.

ಗಳನ್ನು ಹೊಂದಿರುತ್ತದೆ: ಚಕ್ರದ ಕಮಲದ ದಳಗಳ ಬೀಜಾಕ್ಷರಗಳ ಪ್ರಯೋಗಗಳು ಸ್ವಾಧಿಷ್ಠಾನ ಚಕ್ರವನ್ನು ಉದ್ದೀಪನೆಗೊಳಿಸುತ್ತದೆ. (3) ಮಣಿಪೂರಕ ಚಕ್ರ: ಈ ಚಕ್ರದ ಪುರುಷ ದೇವತೆ ಹಾಗೂ ಸ್ತ್ರೀ ದೇವತೆಗಳು ವೃದ್ಧರುದ್ರ ಮತ್ತು ಲಾಕಿನಿ ಅಥವಾ 'ಇಚ್ಛಾ ಶಕ್ತಿ'ಯಾಗಿದೆ. ಈ ಮಣಿಪೂರಕ ಚಕ್ರದ ಪ್ರಾಣಿ 'ಟಗರು'. ಈ ಮಣಿಪೂರಕ ಚಕ್ರದ ವ್ಯಕ್ತಿಯು ಟಗರಿನ ಗುಣಗಳನ್ನು ಹೊಂದಿರುತ್ತಾನೆ. ಬೀಜಾಕ್ಷರ 'ರಂ' ಆಗಿದೆ. ಈ ಚಕ್ರಕ್ಕೆ ದಶದಳಕ ಮೂಲದ ಬೀಜಾಕ್ಷರವು ಡ, ಧ, ಣ, ತ, ಥ, ದ, ಧ, ನ, ಪ, ಫ; ಆಗಿವೆ. ಈ ಬೀಜಾಕ್ಷರಗಳ ಜಪವು ಈ ಚಕ್ರವನ್ನು ಜಾಗ್ರತಗೊಳಿಸುತ್ತದೆ. ಬಹಳ ಬುದ್ಧಿಮತ್ತೆಯುಳ್ಳ ಚಕ್ರ ಇದಾಗಿದೆ. ಅಗ್ನಿ ತತ್ತ್ವದ ಚಕ್ರ; ಎರಡನೆಯ ಚಕ್ರದ ಕಲ್ಪನಾ ಶಕ್ತಿಗಳು ಈ ಚಕ್ರದಲ್ಲಿ ಸಾಕಾರತೆಯನ್ನು ಪಡೆಯುತ್ತದೆ. ಈ ಚಕ್ರದ ಪ್ರಧಾನತೆ: ಎಲ್ಲಿಡರ ಮೇಲಿನ ನಿಯಂತ್ರಣ 'ರೂಪ' ತತ್ತ್ವ ಅನ್ವಯವಾಗುತದೆ. 'ಸಹಸ್ರಾರ'ದಿಂದ ನೇರವಾಗಿ ಏಕಮುಖ ಸಂಚಾರದ ಮಾಹಿತಿ 'ಮಣಿಪೂರರಕ' ಚಕ್ರಕ್ಕಿದ್ದು, ಹಸಿವೆ, ನೀರಡಿಕೆ, ಆಧಾರ ಸ್ವಾಧ, ಇತ್ಯಾದಿಗಳನ್ನು

ನಿಯಂತ್ರಿಸುತ್ತದೆ. 'ಮಣಿಪೂರಕ'ದಿಂದ 'ಅನಾಹುತ' ಚಕ್ರಕ್ಕೆ ಏಕವುಖ ಸಂಚಾರ ಮಾಹಿತಿಯುಂಟಾಗಿ, ಜೀವಾಧಾರವಾದ ಪ್ರಾಣ ಇದರ ನಿಯಂತ್ರಣದಲ್ಲಿದೆ. ಇನ್ನು ಸ್ವಾಧಿಷ್ಠಾನ ಚಕ್ರದಿಂದ ಏಕಮುಖ ಸಂಚಾರ ಮಾಡಿಸಿ ಆಧಾರ ಚಕ್ರಕ್ಕಿದ್ದು; ಕಾಮದ ನಿಯಂತ್ರಣ ಇಲ್ಲಿಂದ ಆಗುತ್ತದೆ. ದ್ವಿಮುಖ ಮಾಹಿತಿ ಸಂಚಾರ 'ಅನಾಹುತ'ದಿಂದ; ವಿಶುದ್ಧಿಯಿಂದ, ಮತ್ತು 'ಆಜ್ಞಾ'ದಿಂದ ಇದ್ದು; ಮಣಿಪೂರಕ ಚಕ್ರದಿಂದ ಹಾಗೂ ಮಣಿಪೂರಕ ಚಕ್ರವು ನಿಯಂತ್ರಣಕ್ಕೆ ಪರಸ್ಪರ ಒದಗುತ್ತದೆ; ಅಂದರೆ, ಈ ಚಕ್ರದ ಪ್ರಧಾನ ಪಾತ್ರ 'ಆಧಾರ', 'ಅನಾಹುತ' 'ವಿಶುದ್ಧಿ', 'ಆಜ್ಞಾ'ಗಳ ಜೊತೆಯಲ್ಲಿ ನೇರವಾದ ಸಂಪರ್ಕಗಳಿವೆ.

ಇದು ಸ್ವಾಧಿಷ್ಠಾನ ಚಕ್ರದ ವಿಷಯದಲ್ಲಿ ಓದಿಕೊಳ್ಳಬೇಕು. (4) ಅನಾಹುತ ಚಕ್ರ : ಪುರುಷ ದೇವತೆ ಈಶಾನರುದ್ರ; ಸ್ತ್ರೀದೇವತೆ 'ಕಾಕಿನಿ' ಅಥವಾ 'ಅನುಭಾವ ಶಕ್ತಿ'. ಈ ಚಕ್ರದ 'ಪ್ರಾಣಿ ಜಿಂಕೆ'. ಈ ಚಕ್ರದ ಬೀಜಾಕ್ಷರ 'ಯಾ' ಹನ್ನರಡು ದಳಕಮಲ. ಕಮಲ ದಳಗಳ ಬೀಜಾಕ್ಷರಗಳು, ಕ, ಖ, ಗ, ಘ,

ಙ; ಚ, ಛ, ಜ, ಯ, ಞ, ಟ, ಠ, ಡ, ಆಗಿವೆ. ಈ ಬೀಜಾಕ್ಷರ ಜಪದಿಂದ ಅನಾಹುತ ಚಕ್ರವು ಜಾಗ್ರತವಾಗುತ್ತದೆ. ಆಧ್ಯಾತ್ಮಿಕವಾಗಿ ಈ ಚಕ್ರವು ಸಾಧಕನ ಪ್ರಾಪಂಚಿಕತೆ ಹಾಗೂ ಅಪ್ರಾಪಂಚಿಕತೆಗಳನ್ನು ಪ್ರತ್ಯೇಕಗೊಳಿಸುತ್ತದೆ. 36 ತತ್ತ್ವಗಳಲ್ಲಿನ ಈಶ್ವರ ತತ್ತ್ವ ಹಾಗೂ ಅದರ ಕೆಳಗಿನ ತತ್ತ್ವಗಳು ಪ್ರತ್ಯೇಕಗೊಳ್ಳುತ್ತವೆ. ಇದು ಜೀವಾತ್ಮ ಹಾಗೂ ಪರಮಾತ್ಮಗಳ ಸಂಗಮ ಸ್ಥಾನವಾಗಿದೆ. ಈಶ್ವರ ತತ್ತ್ವವು ಶಕ್ತಿ ವಿಶಿಷ್ಟ ಪ್ರಾಣದ ಅರಿವಿನ ಸಂಬಂಧವಾದರೆ; ಸಾಧಕನ ಮನ ತತ್ತ್ವವು, ಜೀವಾತ್ಮ ಪ್ರಧಾನವಾಗಿ; ಮಾಯೆ, ಪಂಚಕಂಚುಕ (ಪುರುಷ) 25 ಸಕಲ ತತ್ತ್ವಗಳ ಸಂಪರ್ಕದಲ್ಲಿರುತ್ತದೆ. ಜೀವಾತ್ಮ ತತ್ತ್ವವು (ಪ್ರತ್ಯಗಾತ್ಮವಾಗಿದ್ದು) ಅನಾಹುತ ಚಕ್ರದ ಎಂಟು ದಳಗಳು ಅದೋಮುಖಿಯಾಗಿದ್ದು, ಅದರಲ್ಲಿ ಪ್ರಾಪಂಚಿಕವಾಗಿ ಅಸ್ಥಿತ್ತ್ವದಲ್ಲಿದ್ದರೆ, ಉರ್ಧ್ವ ಮುಖಿಯ ನಾಲ್ಕು ದಳಗಳಲ್ಲಿ, ಈಶ್ವರ ತತ್ತ್ವದ ವಾಸ್ತವ್ಯವಿದ್ದು; ಈ ಪರಮಾತ್ಮ, 'ಜೀವಾತ್ಮ'ಗಳ 'ಸಂಗಮ'ದ ಸ್ಥಾನವಾಗಿ ಅನಾಹುತ ಚಕ್ರವಿದೆ. ಅನಾಹುತ ಚಕ್ರದ ಖಚಿತವಾದ ಸ್ವರೂಪ ಜ್ಞಾನ. ಅದರ ಜೊತೆಯಲ್ಲಿನ ಈಶ್ವರ ತತ್ತ್ವದ ನಿರೂಪಣೆಗಳ ಜ್ಞಾನದಿಂದ ಸಾಧಕನ ಆಧ್ಯಾತ್ಮ ಸಾಧನೆಗಳು ಫಲಪ್ರಧವಾಗುತ್ತವೆ. ಇದು ಆಧಾರ ಚಕ್ರದಂತೆಯೇ 'ಲಿಂಗಪ್ರಧಾನ ಚಕ್ರ'; ಆದರೆ ಅನಾಹುತ ಚಕ್ರದಲ್ಲಿನ 'ಲಿಂಗ'ವು ಹೆಚ್ಚು ಪ್ರಾಧಾನ್ಯತೆಯುಳ್ಳದ್ದಾಗಿದ್ದು, ಈಶ್ವರ ತತ್ತ್ವ ಸಂಬಂಧಿಯಾಗಿದ್ದು; ಸಾಧಕನಲ್ಲಿ ಲಿಂಗತತ್ತ್ವದ ಪ್ರಜ್ಞೆ ವಿಶೇಷವಾಗಿ ಉಂಟಾಗುತ್ತದೆ. ಅನಾಹುತ ಚಕ್ರವು ಏಕಮುಖ ಸಂಚಾರ ಮಾಹಿತಿ ಸ್ವರೂಪದಲ್ಲಿ ಮಣಿಪೂರಕ ಚಕ್ರದಿಂದ ಹಾಗೂ ದ್ವಿಮುಖ ಸಂಸಾರ ಮಾಹಿತಿ ಸ್ವರೂಪದಲ್ಲಿ ಅನಾಹುತ ಚಕ್ರ ಸಂಬಂಧಿಯಾಗಿದೆ. ಸ್ವಾಧಿಷ್ಠಾನ ಚಕ್ರದ ಜೊತೆಯಲ್ಲಿ ದ್ವಿಮುಖ ಮಾಹಿತಿ ಸಂಚಾರತೆಯುಳ್ಳದ್ದಾಗಿದೆ. ಈ ಅನಾಹುತ ಚಕ್ರದ ಮೇಲೆ ಮೂರು ಪ್ರಧಾನ ಚಕ್ರಗಳಿದ್ದು; ಇದರ ಕೆಳಗೆ ಮೂರು ಚಕ್ರಗಳಿದ್ದು, ಆಧ್ಯಾತ್ಮಿಕತೆಯ ಮಧ್ಯ ಭಾಗದಲ್ಲಿದೆ. ಇಲ್ಲಿಂದ ಮೇಲಿನ ಮೂರು ಚಕ್ರಗಳು ಸ್ಪಷ್ಟವಾಗಿ ಅಪ್ರಾಪಂಚಿಕವಾಗಿದ್ದು; ಆಧ್ಯಾತ್ಮಕತೆಯ ಸಾಧನೆಗಳಿಗೆ ಅನಾಹುತ ಚಕ್ರ 'ಪ್ರವೇಶ'ದ್ವಾರವಾಗಿದೆ. ಈ ಚಕ್ರದ ಪ್ರಾಣಿ ಜಿಂಕೆಯು, ಆಧಾರ, ಸ್ವಾಧಿಷ್ಠಾನ, ಮಣಿಪೂರಕ ಚಕ್ರಗಳ ಆನೆ, ಮೊಸಳೆ, ಟಗರುಗಳಿಗಿಂತ ಭಿನ್ನವಾಗಿದ್ದು; ಕಣ್ಣು ಶಬ್ಧ ಮುಂತಾದವುಗಳಿಗೆ ಹೆಚ್ಚು ಸ್ಪಂದಿಸುತ್ತದೆ. ಹೀಗಾಗಿ ಈ ಚಕ್ರ ಪ್ರಧಾನ ವ್ಯಕ್ತಿಯ ಕಣ್ಣು ಚೆನ್ನಾಗಿದ್ದು,

ಅನಾಹತನಾದದ ಗ್ರಹಿಕೆಯಲ್ಲಿ ಶ್ರದ್ಧೆಯುಳ್ಳವನಾಗುತ್ತಾನೆ. (ಪಣ, ಪಶ್ಯಂತಿ, ಮಧ್ಯಮಾ, ವೈಖರಿ ಶಬ್ಧಗಳಲ್ಲಿ ಅನಾಹತನಾದವು ಪರಾ ನಾದವಾಗಿದೆ.) 5. ವಿಶುದ್ಧಿ ಚಕ್ರ: ಇದು 16 ದಳ ಕಮಲದ ಚಕ್ರವಾಗಿದ್ದು, ಅತ್ಯಂತ ಪ್ರಮುಖವಾದ ಚಕ್ರವಾಗಿದೆ. ಈ ಚಕ್ರದ ಬೀಜಾಕ್ಷರ 'ಹ' ಕಾರವಾಗಿದ್ದು; ಹದಿನಾರು ದಳಗಳ ಬೀಜಾಕ್ಷರಗಳು ಅ, ಆ, ಇ, ಈ, ಉ, ಊ, ಋ, ೠ, ಲು, ಲೂ, ಎ, ಐ, ಒ, ಔ, ಅಂ, ಅಃ ಈ ಬೀಜಾಕ್ಷರ

'ಜಪ'ಸಾಧನೆಗಳಿಂದ 'ವಿಶುದ್ಧಿ ಚಕ್ರ' ಶುದ್ಧವಾಗುತ್ತದೆ. ಆಕಾಶ ತತ್ತ್ವ ಸಂಬಂಧಿಯಾಗಿದ್ದು, ಈ ಚಕ್ರ ಶುದ್ಧವಾಗಿದೆ. ಈ ಚಕ್ರದ ಪುರುಷದೇವತೆ ಪಂಚಷಕ್ತ ಶಿವ, ಸ್ತ್ರೀ ದೇವತೆ 'ಶಾಕಿನಿ' ಅಥವಾ 'ಆನಂದ ಶಕ್ತಿ'ಯಾಗಿದೆ. ಈ ಚಕ್ರದ ಪ್ರಾಣಿ, ಗಜ (ಆನೆ)ವಾಗಿದೆ. ಆದರೆ ಈ ಆನೆಗೆ ಕೇವಲ ಒಂದೇ ಸೊಂಡಿಲು ಇರುತ್ತದೆ. ಕಾರಣ ಆಧಾರ ಚಕ್ರದ ಏಳು ವಿವರಣೆಗಳು ಕಳೆದು ಕೇವಲ ಶುದ್ಧ ಶಬ್ಧ, ಸ್ವರೂಪದ ಮುಕ್ತ ಸ್ಥಿತಿಯಾಗಿದೆ. ಗಂಧ, ರಸ; ರೂಪ, ಸ್ಪರ್ಶ, ಶಬ್ಧಗಳ ಸಂಮ್ಮಿಲನ ಸ್ಥಾನವಾಗಿದೆ. ಪಂಚಭೂತಗಳ ಅತ್ಯಂತ ಶುದ್ಧ ಸ್ವರೂಪ ಈ ಚಕ್ರದಲ್ಲಿ ಅಸ್ಥಿತ್ವದಲ್ಲಿದೆ. ಶಿವನ "ಪಂಚಮುಖ'ಗಳನ್ನು ಈ ಚಕ್ರ ಪ್ರತಿಪಾದಿಸುತ್ತದೆ. ಅಘೋರ, ಈಶಾನ, ಮಹಾದೇವ, ಸದಾಶಿವ, ರುದ್ರ, ಇವು ಪಂಚಭೂತಗಳನ್ನು ಪ್ರತಿಪಾದಿಸುತ್ತದೆ. ಅಘೋರ, ಈಶಾನ, ಮಹಾದೇವ, ಸದಾಶಿವ, ರುದ್ರ, ಇವು ಪಂಚಭೂತಗಳನ್ನು ಪ್ರತಿಪಾದಿಸುತ್ತದೆ. ವಿಶುದ್ಧಿ ಚಕ್ರದ ಏಕಮುಖ; ದ್ವಿಮುಖ ಮಾಹಿತಿ ಸ್ವರೂಪ ಸಂಬಂಧಗಳು, ಆಧಾರ; ಅಹಾಹತ, ಸ್ವಾಧಿಷ್ಠಾನ ಚಕ್ರಗಳ ಜೊತೆಯಲ್ಲಿ ಇದೆ. ವಿಶುದ್ಧಿ ಚಕ್ರ ಪ್ರಧಾನ ವ್ಯಕ್ತಿಯ ಜ್ಞಾನ ಪಥದಲ್ಲಿದ್ದು ಪರಮಾತ್ಮ ಸ್ವರೂಪದ 'ಚಿತ್' ಸ್ವರೂಪವನ್ನು ಬೆಳಗೊಂಡಿರುತ್ತಾನೆ. ಇದು ಶುದ್ಧ ಪ್ರಜ್ಞೆಯ ಸ್ವರೂಪವಾಗಿದೆ. ಅವನಿಗೆ ಸ್ವಸ್ವರೂಪ ಜ್ಞಾನವಾಗಿ, ದೈವ ಸ್ವರೂಪಿಯಾಗಿ ಲಿಂಗತತ್ತ್ವವೇ ಆಗಿರುತ್ತಾನೆ. ಈ ಸ್ಥಿತಿಯಲ್ಲಿ 'ಚಿತ್ತ' ಸ್ವರೂಪಿಯಾಗಿ ಪ್ರಪಂಚದ ಬಂಧನಗಳ ಪರಿವೆ ಇಲ್ಲದೆ ಸರ್ವ ಸ್ವತಂತ್ರನಾಗಿರುತ್ತಾನೆ. ಈ ಸ್ಥಿತಿಯಲ್ಲಿ ವಿಶ್ವಪ್ರಜ್ಞೆಯ 'ಚಿತ್' ಸ್ಥಿತಿಯನ್ನು ಒಳಗೊಂಡಿರುತ್ತಾನೆ. ಶಾಂತಿ, ಸಮಾಧಾನ, ಜ್ಞಾಪಕ ಶಕ್ತಿಯ ಆಗರವಾಗಿದ್ದು, ಆತ್ಮ ವಿಶ್ವಾಸಿಯಾಗಿರುತ್ತಾನೆ. (6) ಆಜ್ಞಾಚಕ್ರ: ಈ ಚಕ್ರದಲ್ಲಿ ಪುರುಷ ದೇವತೆ ಹಾಗೂ ಸ್ತ್ರೀ ದೇವತೆ ಎರಡೂ ಒಂದೇ ಆಗಿದ್ದು, ಅರ್ಧನಾರೀಶ್ವರ ಸ್ಥಿತಿಯಲ್ಲಿರುತ್ತಾರೆ. ಇಲ್ಲಿ ಕೇವಲ ಲಿಂಗತತ್ತ್ವದ ಪ್ರಜ್ಞೆಯಿದ್ದು; ಯಾವುದೇ ಪ್ರಾಣಿಯ ಅಸ್ಥಿತ್ವವಿರುವುದಿಲ್ಲ. ಆಧಾರದಿಂದ ಏಳು ಸೊಂಡಿಲ ಆನೆ, ಮೊಸಳೆ,

ಟಗರು, ಜಿಂಕೆ, ಒಂದು ಸೊಂಡಿಲ ಆನೆ, ಆದ ಮೇಲೆ ಯಾವುದೇ ಪ್ರಾಣಿ ವರ್ಗದ ಧರ್ಮಗಳು ಆಜ್ಞಾ ಚಕ್ರದಲ್ಲಿರದೆ ಕೇವಲ ದೈವ ಗುಣಗಳೇ ಇದೆ. 'ಶಿವ-ಶಕ್ತಿ' (ಮೊದಲ 2 ತತ್ತ್ವಗಳು; 36 ತತ್ತ್ವಗಳಲ್ಲಿ) ಸ್ವರೂಪ ಮಾತ್ರವಿದ್ದು; ಅಖಂಡ ಚೈತನ್ಯಾತ್ಮಕ ಶಕ್ತಿ ಸ್ವರೂಪದ "ಶುದ್ಧ ಪ್ರಜ್ಞೆ" ಇರುತ್ತದೆ. (ಶುದ್ಧ ಅರಿವು). ಈ ಆಜ್ಞಾಚಕ್ರದ ಬೀಜಾಕ್ಷರ 'ಓಂ'ಕಾರವಾಗಿದೆ. ಎರಡು ದಳ ಕಮಲವಿದ್ದು; ದಳಗಳ ಬೀಜಾಕ್ಷರಗಳು, ಡಂ; ಕ್ಷಂ ಗಳಾಗಿವೆ. ಈ ಬೀಜಾಕ್ಷರಗಳ ಜಪ ಮತ್ತು ಸಾಧನೆಯಿಂದ ಆಜ್ಞಾಚಕ್ರ ಜಾಗ್ರತೆಗೊಳ್ಳುತ್ತದೆ. ಇಲ್ಲಿ ಶಕ್ತಿ 'ಹಾಕಿನಿ'ಯಾಗಿದ್ದು ಅದು 'ಆದಿಶಕ್ತಿ ಅಥವಾ ಚಿಟ್ಚಕ್ತಿ' ಸ್ವರೂಪದಲ್ಲಿದೆ. ಇಲ್ಲಿ "ಪ್ರಾಣ ಮತ್ತು ಮನಸ್ಸು" ಅಥವಾ ಈಶ್ವರನ ಅಧೀನತೆಗೆ ಬರುತ್ತದೆ. ಇಲ್ಲಿ ಶುದ್ಧ ಸ್ಫಟಿಕ ವರ್ಣದ ಅಸ್ಥಿತ್ವವಿರುತ್ತದೆ. ಆಜ್ಞಾ ಚಕ್ರದ ಸ್ಥಿತಿಯ ಗುಣಧರ್ಮಗಳನ್ನು ಪಡೆಯುವುದೇ ಯಾವುದೇ ವ್ಯಕ್ತಿಯ ಆಧ್ಯಾತ್ಮ ಸಾಧನೆಯಾಗಿದೆ. ಈ ಆಧ್ಯಾತ್ಮ ಸಾಧನೆಯಲ್ಲಿ ಸಾಧಕನು ತನ್ನ ಎಲ್ಲಾ ಚಕ್ರ ದಳದಲ್ಲಿರುವ, ಅಂದರೆ ಆಧಾರ, ಸ್ವಾಧೀಷ್ಠಾನ, ಮಣಿಪುರ, ಅನಾಹತ, ವಿಶುದ್ಧಿ, ಆಜ್ಞಾ ಚಕ್ರಗಳಲ್ಲಿನ ಕ್ರಿಯಾಶಕ್ತಿ; ಜ್ಞಾನಶಕ್ತಿ, ಇಚ್ಛಾಶಕ್ತಿ, ಅನುಭಾವಶಕ್ತಿ, ಆನಂದಶಕ್ತಿ, ಆದಿಶಕ್ತಿ, ಅಥವಾ ಚಿಚ್ಛಕ್ತಿಗಳನ್ನು ಸಾಕ್ಷಾತ್ಕರಿಸಿಕೊಂಡಾಗ ಮಾತ್ರ. ಅವನಿಗೆ ಚೈತನ್ಯ ಸ್ವರೂಪಿ 'ಶಿವ'ನ ಅಭಿವ್ಯಕ್ತತೆ ಉಂಟಾಗುತ್ತದೆ. ಆದರೆ ಇಂತಹ ಸ್ಥಿತಿ ಉಂಟಾಗುವುದು ಹೇಳಿದಷ್ಟು ಸುಲಭವಲ್ಲ. ಅನೇಕ ಧರ್ಮಗಳಲ್ಲಿ ಅನೇಕ ಭಿನ್ನ-ಭಿನ್ನ ಮಾರ್ಗಗಳಿವೆ. ಈ ಎಲ್ಲಾ ಭಿನ್ನ-ಭಿನ್ನ ಮಾರ್ಗಗಳಲ್ಲಿನ ಸಾಧನೆಯ ಏಳ್ಗೆ ಅನೇಕ ವಿಚಾರಗಳ ತಿಳುವಳಿಕೆ ಹಾಗೂ ಸೂಕ್ಷವಾದ 'ಗುಟ್ಟುಗಳ' ತಿಳುವಳಿಕೆಗಳ ಆಚರಣೆಯ ಮೇಲೆ ಅವಲಂಬಿತವಾಗಿದೆ. ವಿಷಯದ; ಅಂದರೆ ಮಾಹಿತಿಗಳ ಕೊರತೆಯೇ ಪ್ರಮುಖವಾದ "ಅಡೆ-ತಡೆ" ಸಾಧನ ಮಾರ್ಗಗಳ ಆಚರಣೆಗೆ ಉಂಟಾಗಿದೆ. ಯಾವುದೇ ಜೀವಿಯು ತನ್ನ ಜೀವಾತ್ಮ ಸ್ಥಿತಿಯನ್ನು ಕಳೆದುಕೊಂಡು ಪರಮಾತ್ಮ ಸ್ಥಿತಿಯಾದ 'ಶಿವ' ತತ್ತ್ವ ಸ್ವರೂಪವನ್ನು ಪಡೆಯಲುಬೇಕಾದ ಮಾಹಿತಿಗಳನ್ನು ಪಡೆದು ಸಾಧನ ಮಾರ್ಗಗಳನ್ನು ಅನುಸರಿಸಬೇಕಾಗುತ್ತದೆ. ಆದರೆ ಯಾವುದೇ ಸಾಧನಮಾರ್ಗವಿರಬಹುದು,

ಮೂಲಭೂತವಾಗಿ ಸಾಧಕನ ದೇಹದಲ್ಲಿನ 'ಶಕ್ತಿ'ಗಳ (ಎಲ್ಲಾ) ಸಾಕ್ಷಾತ್ಕಾರವಾಗದೇ; 'ಚೈತನ್ಯ'ದ ಸಾಕ್ಷಾರತೆ ಸಾಧ್ಯವೇ ಇಲ್ಲ. ಈ ರೀತಿಯ ಆಧಾರಗಳ ಹಿನ್ನೆಲೆಯಲ್ಲಿ ಆಧ್ಯಾತ್ಮಿಕವಾಗಿ ಅನೇಕ ಮಾರ್ಗಗಳು ಸಾಧನ ಪಥಗಳಾಗಿವೆ. ಶಾಕ್ತ; ಗಾಣಪತ್ಯ; ನೌಕ, ಶೈವ, ವೈಷ್ಣವ, ಮುಂತಾದ ಪದ್ಧತಿಗಳಿದ್ದು ಅವುಗಳಲ್ಲಿ ಕೆಲವು ವೇದ ಸಮ್ಮತವಾಗಿದ್ದು; ಕೆಲವು ವೇದ ಸಮ್ಮತವಲ್ಲದ ಸಾಧನ ಪದ್ಧತಿಗಳಿವೆ. ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಸ್ಥೂಲವಾಗಿ ಈ ವಿಚಾರಗಳ ಪ್ರತಿಪಾದನೆ ಇದೆ. ಈ ವಿಚಾರಗಳ ಚರ್ಚೆಯನ್ನು ವಿಷಧೀಕರಣಗಳ ಸಲುವಾಗಿ ಇಲ್ಲಿ ಯಥಾರ್ಥವಾಗಿ ಪ್ರತಿಪಾದಿಸಲಾಗಿದೆ. ಗ್ರಂಥ ರಚನೆ ಮಾಡಿದ ಶ್ರೀ ಶಿವಯೋಗಿ ಶಿವಾಚಾರ್ಯರು ತಮ್ಮ ಗ್ರಂಥ ರಚನೆಗೆ ಕಾರಣವನ್ನು ಕೊಡುತ್ತಾರೆ. ಶ್ರೀ ಶಿವಯೋಗಿ ಶಿವಾಚಾರ್ಯರು "ಶಿವಾಗಮಗಳ ಪರಿಜ್ಞಾನದ ಪರಿಪಾಕದಿಂದ ಸುಗಂಧಿತವಾದ ಯಾವ ಶಿವಯೋಗಿಯ ಕೀರ್ತಿ ಪುಷ್ಪದಿಂದ ದಿಕ್ಕುಗಳ ಮುಖಗವು ಸುವಾಸಿತವಾಯಿತೋ, ಬೌದ್ಧಾದಿ ಪ್ರತಿ ಸಿದ್ಧಾಂತಗಳ ಕತ್ತಲೆಗೆ ಸೂರ್ಯೋಪಾದಿಯಲ್ಲಿರುವ ಯಾರಿಂದ (ಶಿವಯೋಗಿ ಶಿವಾಚಾರ್ಯರಿಂದ) ಸನಾತನವಾದ ಶಿವಭಕ್ತಿಯು ರಕ್ಷಿಸಲ್ಪಟ್ಟಿತೋ – ಶಿವತತ್ತ್ವ ಪರಿಜ್ಞಾನವೆಂಬ ಚಂದ್ರಿಕೆಯಿಂದ (ಬೆಳದಿಂದಗಳಿನಿಂದ) ಆವರಿಸಲ್ಪಟ್ಟು ಚಂದ್ರನಂತೆ ಇರುವ ಅವನು (ಶಿವಯೋಗಿ ಶಿವಾಚಾರ್ಯನು) ಮಹಾವೀರ ಶೈವರಿಗೆ ಧರ್ಮ ಮಾರ್ಗ ಪ್ರವರ್ತಕನಾಗಿದ್ದನು. ಆದರ ಪೂರ್ವಕವಾಗಿ (ಶಾದರಂ) ಕಾಮಿಕಾದಿ ವಾತುಲಾತವಾದ ಶೈವತಂತ್ರಗಳನ್ನು (ಆಗಮಗಳನ್ನು) ಮತ್ತು ಶಿವ ಸಂಬಂಧಿಯಾದ ಎಲ್ಲ ಪುರಾಣಗಳನ್ನು ಅವಲೋಕನಮಾಡಿ (ಪರಿಶೀಲಿಸಿ) – ವೇದ ಮಾರ್ಗಗಳಿಗೆ ವಿರೋಧವಿಲ್ಲದ ಹಾಗೆ ವಿಶಿಷ್ಟವಾದ ಆಚಾರ ಸಿದ್ಧಿಗಾಗಿ, ಆಸನ್ಮಾಗಗಳ ನಿರಸನಕ್ಕೆ (ಬಿಡಲು) ವಿವೇಕಿಗಳ ಪ್ರಮೋದಕ್ಕಾಗಿ (ಸಂತೋಷಕ್ಕಾಗಿ) ವೀರಶೈವರಿಗೆ ಸರ್ವಸ್ವವಾದ, ಪಕಲಾರ್ಥಗಳನ್ನು ಪ್ರಕಾಶಗೊಳಿಸುವ ಅಖಿಲ ದೋಷಗಳು ಮುಟ್ಟದಿರುವ ಶುದ್ಧ ಮನಸ್ಸಿನವರಿಂದ ಸ್ವೀಕರಿಸಲ್ಪಟ್ಟು,

ಆ ಎಲ್ಲಾ ಇಪ್ಪತ್ತೆಂಟು ಆಗಮಗಳಲ್ಲಿ, ಅಖಿಲ ಪುರಾಣಗಳಲ್ಲಿ ಪೂರ್ವದಲ್ಲಿ ದೇವನಿಂದ ದೇವಿಗೆ ಮತ್ತು ಅವರ ಮಗನಿಗೆ ಹೇಳಲ್ಪಟ್ಟಿರುವಂತೆ (ಶಿವನಿಂದ ಪಾರ್ವತಿಗೆ ಮತ್ತು ಅವರ ಮಗನಾದ ಷಣ್ಮುಖನಿಗೆ ಹೇಳಲ್ಪಟ್ಟಿರುವ) ಆ ಸಂಪ್ರದಾಯ ಸಿದ್ಧನಾದ (ಶಿವಸಂಪ್ರದಾಯ) ಮಹಾತ್ಮನಾದ ರೇಣುಕ–ಗಣೇಶ್ವರನಿಂದ ಪುನಃ ಕ್ಷಿತಿ (ಭೂಮಂಡಲದಲ್ಲಿ)ಯಲ್ಲಿ ಅಗಸ್ತ್ಯನಿಗೆ ಹೇಳಲ್ಪಟ್ಟಿತು. ನೂರೊಂದು ಸ್ಥಲಗಳಿಂದ ಕೂಡಿದ ವೀರಶೈವ ಮಹಾತಂತ್ರವನ್ನು (ಮಹಾ ಆಗಮವನ್ನು ಬುದ್ಧಿವಂತರಲ್ಲಿ (ಸುಧಿಯಾಂ) ಶ್ರೇಷ್ಠನಾದ (ಶಿವಯೋಗಿ ಶಿವಾಚಾರ್ಯನು) ಲೋಕದ ಅನುಗ್ರಹಕ್ಕಾಗಿ ಹೇಳಿದನು. ಸಮಸ್ತ ಶೈವತಂತ್ರಗಳ ಉತ್ತರ ಭಾಗದಲ್ಲಿರುವುದರಿಂದ ಮತ್ತು ಇದರ ಉತ್ತರದಲ್ಲಿ ಮತ್ತಾವುದೂ ಇಲ್ಲದಿರುವುದರಿಂದ ಇದು 'ಸಿದ್ಧಾಂತ ಶಿಖಾಮಣಿ' ಎಂಬ ಹೆಸರಿನಿಂದ ಪ್ರಖ್ಯಾತವಾಗಿದೆ. (ಪ್ರತೀಯತೇ) (ತಂತ್ರವೆಂದರೆ ಆಗಮ, ಆಗಮವೆಂದರೆ ಸಿದ್ಧಾಂತವಾಗಿದೆ. ಇವು ಮೂರೂ ಸಹ ಒಂದೇ ಆಗಿದೆ). ಸಮಸ್ತ ಶೈವ ತಂತ್ರಗಳ (ಆಗಮಗಳ, ಸಿದ್ಧಾಂತಗಳ)ನ್ನು ಅನುಸರಿಸಲ್ಪಟ್ಟ ಸಕಲ ಅರ್ಥಗಳನು ಒಳಗೊಂಡ ಪ್ರಕಟಿಸಲ್ಪಟ್ಟು ಶಿವಜ್ಞಾನದಿಂದುಂಟಾದ ಅಧ್ವೈತಭಾವ ಪ್ರಸಾದವುಳ್ಳ, ಪಂಡಿತರಿಂದ ಶ್ಲಾಘಿಸಲ್ಪಟ್ಟು, ಪಶುಪತಿ ಮತ ಸಾರವಾದ ಇದರಲ್ಲಿ (ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ) ವಿಶಿಷ್ಟರಾದ ವೀರಶಯವರು ತಮ್ಮ ಬುದ್ಧಿಯನ್ನು ತೊಡಗಿಸಲಿ. (ಮಡಿಂ ವಿದಧತು) "ಸಿಶಿ (1–21 ರಿಂದ 32) ಈ ಹಿನ್ನೆಲೆಗಳಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವು ರಚನೆಯಾಗಿರುವುದರಿಂದ ಈ ಗ್ರಂಥದಲ್ಲೇ ಅನೇಕ ವಿಧದ ಸಿದ್ಧಾಂತ, ಶಾಸ್ತ್ರ, ಪದ್ಧತಿ, ಸಾಧನೆಗಳು ಇರುವುದನ್ನು ಪ್ರಸ್ತಾಪಿಸಿ; ಒಂದು ಶಿವಯೋಗ ಮಾರ್ಗದ ಆಧಾರದ ಸಿದ್ಧಾಂತವು ಹೇಗೆ ಭಿನ್ನವಾಗಿದೆ. ಹಾಗೂ ಉಪಯೋಗವಾಗಿದೆ ಎಂದು 'ಸಿದ್ಧಾಂತ ಕಥನ' ಭಾಗದಲ್ಲಿ ಪ್ರತಿಪಾದಿಸಲಾಗಿದೆ. ಶ್ರೀ ರೇಣುಕಾಗಸ್ತ್ಯರ

ಸಂವಾದದ ತಳಹದಿಯಾಗಿ, ಶ್ರೀ ರೇಣುಕಾರನ್ನು ಅಗಸ್ತ್ಯರು ಪ್ರಾರ್ಥಿಸುತ್ತಾರೆ." ಮುನಿ ಶ್ರೇಷ್ಠರಲೆಲ್ಲಾ ನಾನೋರ್ವನೇ ಯಾವಾಗಲೂ ಪ್ರಶಂಶನೀಯನಾದವನು, ಕಾರಣವೇನೆಂದರೆ,

ತಮ್ಮ ಆಗಮನದ ಸಂಪತ್ತು ನನ್ನ ಹೊರತಾಗಿ ಇನ್ನಾದರೂ ಲಭ್ಯವಾಗಿರುವುದಿಲ್ಲ. ನಿಮ್ಮ ದಿವ್ಯ ದರ್ಶನ ಪುಣ್ಯದಿಮದ ನನ್ನ ಶಿವಜ್ಞಾನವು ಸ್ಥಿರವಾಯಿತು. ನನ್ನ ತಪಸ್ಸಿನ ಆಚರಣೆಯು ಶಾಶ್ವತವಾಯಿತು. ನನ್ನ ಮುನಿತ್ವವು ಗಟ್ಟಿಗೊಂಡು ಸ್ಥಿರವಾಯಿತು. ಈ ಸಂಸಾರವೆಂಬ ಸರ್ಪವು ಕಚ್ಚಿ ಮೂರ್ಛಿತರಾದ ದೇಹಿಗಳಿಗೆ ಕಲ್ಯಾಣಕರವಾದ ನಿಮ್ಮ ದೃಷ್ಟಿ ಪಾತವು ಸಂಜೀವಿನಿ ಔಷಧಿಯಾಗಿದೆ. ಸಮಸ್ತ ಲೋಕಗಳನ್ನು ಸುಡುತ್ತಿರುವ ಜೀವಿಗಳ ತಾಪತ್ರಯವೆಂಬ ಪ್ರಳಯಾಗ್ನಿಯು ನಿಮ್ಮ ಪಾದೋದಕದ ಒಂದು ಬಿಂಧುವನ್ನು ಸೇವಿಸಿದ ಮಾತ್ರದಿಂದಲೇ ಶಾಂತವಾಗುತ್ತದೆ. ನೀವು ಶಿವನಿಗೆ ಪ್ರಿಯರಾದ ಗುಣಗಳಿಗೆ ಒಡೆಯರಾದ ರೇಣುಕರು ಎಂಬುದನ್ನು ನಾನು ತಿಳಿದಿದ್ದೇನೆ. ನನಗೆ ಅನುಗ್ರಹ ಮಾಡುವ ಅಪೇಕ್ಷೆಯಿಂದಲೇ, ತಾವು ಈ ಭೂಮಿಯ ಮೇಲೆ ಅವತಾರವನ್ನು ತಾಳಿದ್ದೀವಿ. ಶಿವ ಜ್ಞಾನದಿಂದ ಜನ್ಮ ಬಂಧನವನ್ನು ಕಳೆದು ಕೊಂಡಿರುವ ನಿನ್ನಂಥ ಸಿದ್ಧ ಪುರುಷರು ಈ ಮತ್ಸ್ಯ ಲೋಕದಲ್ಲಿ ಸಂಚರಿಸುವುದು. ಇತರರಿಗೆ ಅನುಗ್ರಹವನ್ನು ಮಾಡುವುದಕ್ಕಾಗಿಯೇ ಆಗಿರುವುದು. ಹೇ ಸರ್ವಜ್ಞನಾದ ರೇಣುಕನೇ 'ಶೃತಿ' ಸಮ್ಮತವಾದ ಸರ್ವಾರ್ಥ ಸಾಧಕವಾದ ಶಿವನಿಗೆ ಸಂಬಂಧಿತವಾದ ಸಿದ್ಧಾಂತವನ್ನು ಸಾಕ್ಷಾತ್ ನಿನ್ನ ಮುಖದಿಂದಲೇ ಕೇಳಲು ಅಪೇಕ್ಷಿಸುತ್ತಿರುವೆನು. ಆದ್ದರಿಂದ ನನಗೆ ನೀನು ಅದನ್ನು ಬೋಧಿಸು. ತತ್ಕ್ಷಣದಲ್ಲಿಯೇ ಸಿದ್ಧಿಯನ್ನು ಕೊಡುವ, ಎಲ್ಲಾ ಯೋಗೀಂದ್ರರಿಂದ ಸ್ವೀಕರಿಸಲ್ಪಟ್ಟಿರುವ ದುರಾಚಾರಿಗಳಿಗೆ ದುಃಸಾಧ್ಯವಾದ, ವೇದವಿದರಿಂದ ಸ್ವೀಕೃತವಾದ ಶಿವಜೀವರ ಐಕ್ಯಾ ಬೋಧಕವಾದ ಮಹಾಜ್ಞಾನದ ಸಂಪ್ರದಾಯವನ್ನು ಪ್ರವರ್ತನಗೊಳಿಸುವ ಶಿವಾದ್ವೈತ ಸಿದ್ಧಾಂತ.

ಶೃತಿ = ಉಪನಿಷತ್ತುಗಳು

ಶಿವ = ಶಿತತತ್ತ್ವ ಸಂಬಂಧವಾದ (36 ತತ್ತ್ವಗಳಲ್ಲಿ ಮೊದಲ ತತ್ತ್ವ)

ವನ್ನು ನನಗೆ ಬೋಧಿಸು. ಹೇ ದಿವ್ಯ ಯೋಗಿಯಾದ ರೇಣುಕನೇ, ಎಲ್ಲ ಜೀವಿಗಳಿಗೆ ಅನುಗ್ರಹಕಾರಕವಾದ, ವೇದ ವಿರುದ್ಧಗಳಾದ ತಂತ್ರಗಳನ್ನು ನಿರಾಕರಿಸಿದ ವೇದ ಸಮ್ಮತವಾದ ಸಿದ್ಧಾಂತ ಸಾರವನ್ನು ತಾವು ನನಗೆ ಉಪದೇಶವನ್ನು ಮಾಡಿ ಅನೇಕ ಆಗಮಗಳ ಶ್ರವಣದಿಂದ ಸಂಶಯಗೊಂಡಿರುವ ನನ್ನನ್ನು ಕೂಡಲೇ ಕೃತಾರ್ಥನನ್ನಾಗಿ ಮಾಡಬೇಕು". (ಸಿ.ಶಿ. 4-46 ರಿಂದ 54) ಹೀಗೆ ಮುಂದುವರೆಯುತ್ತಾ" ಬಳಿಕ ಅಗಸ್ತ್ಯರ ಭಿನ್ನಪವನ್ನು ಕೇಳಿ ಗಣನಾಯಕರಾದ ರೇಣುಕರು ಕ್ಷಣ ಕಾಲ ಸಾಂಬ (ಉಮಾಪತಿ) ನಾದ ಮಹದೇವನನ್ನು ಧ್ಯಾನಮಾಡಿ ಸಮಾಧಾನ ಚಿತ್ತದಿಂದ ನುಡಿದರು. ಸಮಸ್ತಾಗಮಗಳಲ್ಲಿ ಪಾರಂಗತನಾದ ಮುನಿಗಳಲ್ಲಿ ಶ್ರೇಷ್ಠನಾದ ಎಲೈ ಅಗಸ್ತ್ಯನೇ ಶಿವಜ್ಞಾನವನ್ನು ಉಂಟುಮಾಡುವ ಸಿದ್ಧಾಂತವನ್ನು ಹೇಳುವೆನು. ಆದರ ಪೂರ್ವಕವಾಗಿ ಕೇಳು. ಹೇ ಅಗಸ್ತ್ಯನೇ "ಅಭಿರುಚಿಯ" ಬೇಧದಿಂದ "ಭಿನ್ನ ಭಿನ್ನಚಾರ"ಗಳಿಂದ ಭಿನ್ನ-ಭಿನ್ನ "ಅರ್ಥ"ಗಳನ್ನು ವಿವರಿಸುವುದರಿಂದ ಸಿದ್ಧಾಂತಗಳು "ಅನೇಕ ವಿಧವಾಗಿ ಪ್ರಖ್ಯಾತವಾಗಿದೆ. "ಸಂಖ್ಯಾ ಶಾಸ್ತ್ರ," "ಯೋಗ ಶಾಸ್ತ್ರ," "ಪಾಂಚರಿತ್ರೆ" "ವೇದಗಳು", ಹಾಗೂ "ಪಾಶುಪತ ಶಾಸ್ತ್ರ", ಇವೆಲ್ಲಾ ಪ್ರಮಾಣಗಳಾಗಿವೆ.

ಆದ್ದರಿಂದ ಇವುಗಳನ್ನು ಯುಕ್ತಿ ತರ್ಕಗಳಿಂದ ಖಂಡಿಸಕೂಡದು. ಹೇ ಮಹಾ ಮುನಿಯೇ ಸಾಂಖ್ಯಾದಿ ಸರ್ವ ಶಾಸ್ತ್ರಗಳಿಗೆ ವೇದವೇ ಪ್ರಧಾನವಾದುದು. ವೇದವನ್ನು ಅನುಸರಿಸಿದ್ದರಿಂದಲೇ ಇವುಗಳ ಪ್ರಾಮಾಣ್ಯವು ನಿಶ್ಚಿತವಾಗಿರುತ್ತದೆ. ಹೇ ಮಹಾ ಮುನಿಯೇ ಪಃತರಾತ್ರ, ಸಾಂಖ್ಯ ಮತ್ತು ಯೋಗ ಶಾಸ್ತ್ರಗಳು ವೇದದ ಏಕದೇಶವತಿಗಳಾಗಿರುತ್ತವೆ. (ವೇದಗಳ ಒಂದು ಭಾಗವನ್ನು ಮಾತ್ರ ಒಪ್ಪುವಂತಹುಗಳಾಗಿವೆ.) ಆದರೆ ಶೈವ (ಸಿದ್ಧಾಂತ)ವು ಸಂಪೂರ್ಣವಾಗಿ ವೇದಮಯ ಎನ್ನುವುದು ನಿಗಮಾಗಮ ತಜ್ಞರ ಅಭಿಮತವಾಗಿದೆ. ಹೇ ಮಹಾ ಮುನಯೇ ವೇದದ ಒಂದು ಭಾಗವನ್ನು ಒಪ್ಪುತ್ತಿರುವ ಸ್ಥಾಖ್ಯಾದಿಶಾಸ್ತ್ರಗಳಿಗಿಂತಲೂ, ಸರ್ವ ವೇದಾನುಸಾರಿಯಾದ ಶೈವ (ಸಿದ್ಧಾಂತ) ಶಾಸ್ತ್ರವು ಎಲ್ಲಕ್ಕಿಂತ ವಿಶಿಷ್ಟ (ವಿಲಕ್ಷಣ)ವಾಗಿದೆ. ಶಿವನಿಂದ ಉಪದೇಶಿತವಾದ "ಶೈವತಂತ್ರ"ವು "ಸಿದ್ಧಾಂತ"ವೆಂಬುದಾಗಿ ಹೇಳಪ್ಪಟ್ಟಿದೆ. ಇದು ಸರ್ವ ವೇದಾರ್ಥಗಳ ಸ್ವರೂಪವಾದ್ದರಿಂದ ಇದು ಯಾವಾಗಲು ವೇದದಂತೆ ಪ್ರಾಮಾಣ್ಯವಾಗಿರುತ್ತದೆ. ಪರಮಾತ್ಮನಾದ ಶಿವನಿಂದ ಉಪದೇಶಿಸಲ್ಪಟ್ಟು ಆಗಮಗಳು, 'ಶೈವ', 'ಪಾಶುಪತ' ಸೋಮ, ಮಲಾಕಲವೆಂದು ವೈವಿಧ್ಯದಿಂದ ಹಲವು ಬಗೆಯಾಗಿವೆ. ಅವುಗಳಲ್ಲಿ "ಶೈವ ಶಾಸ್ತ್ರ"ವು 'ವಾಮ', 'ದಕ್ಷಿಣ' 'ಮಿಶ್ರ' ಮತ್ತು "ಸಿದ್ಧಾಂತ"ವೆಂಬ ಹೆಸರಿನಿಂದ ನಾಲ್ಕು ವಿಧವಾಗಿರುತ್ತದೆ ಎಂಬುದಾಗಿ ಎಲ್ಲ ಆಗಮತರಿಂದ ನಿಶ್ಚಯಿಸಲ್ಪಟ್ಟಿದೆ. "ಶಕ್ತಿ"ಯ ಉಪಾಸನೆಯೇ ಪ್ರಧಾನವಾದದ್ದು "ವಾಮತಂತ್ರ"ವು. "ಭೈರವ." ಉಪಾಸನೆಯೇ ಪ್ರಧಾನವಾದದ್ದು ದಕ್ಷಿಣ ತಂತ್ರವು – "ಬ್ರಾಹ್ಮಿ" ಮೊದಲಾದ ಸಪ್ತ ಮಾತೃಕೆಯರ ಉಪಾಸನೆಯೇ ಪ್ರಧಾನವಾದದ್ದು ಮಿಶ್ರತಂತ್ರನು. ಇನ್ನು ವೇದ ಸಮ್ಮತವಾದದದ್ದೇ "ಸಿದ್ಧಾಂತ ತಂತ್ರ"ವು. "ಸಿದ್ಧಾಂತ"ವೆಂಬ ಹೆಸರಿನ ಶಿವಾಗಮವು "ವೇದೋಕ್ತವಾದ ಧರ್ಮ"ವನ್ನು ಪ್ರತಿಪಾದಿಸುವುದರಿಂದ ಮತ್ತು ವೇದ ಬಾಹ್ಯಗಳಿಂದ ಚಾರ್ವಾಕಾದಿಗಳನ್ನು ವಿರೋಧಿಸುವುದರಿಂದ ಇದು "ವೇದ ಸಮ್ಮತ"ವೆಂದು ಹೇಳಲ್ಪಟ್ಟಿದೆ. "ವೇದ" ಮತ್ತು "ಸಿದ್ಧಾಂತ" ಶಾಸ್ತ್ರಗಳಲ್ಲಿ ಒಂದೇ ವಿಷಯ ಪ್ರತಿಪಾದಿಸಲ್ಪಟ್ಟಿರುವುದರಿಂದ ಪಂಡಿತರು ಇವೆರಡ "ಪ್ರಾಮಾಣ್ಯ"ವನ್ನು ಯಾವಾಗಲೂ "ಸಮಾನ"ವಾಗಿಯೇ ತಿಳಿದುಕೊಳ್ಳಬೇಕು. ಶಿವನಿಂ ಉಪದೇಶಿಸಲ್ಪಟ್ಟು "ಕಾಮಿಕಾದಿ ವಾತು ಲಾಂತ್ಯಗಳಾದ "ಸಿದ್ಧಾಂತ"ವೆಂಬ ಹೆಸರಿನ ಮಹಾತಂತ್ರ"ದ ಉತ್ತರ ಭಾಗದಲ್ಲಿ ಶ್ರೇಷ್ಠವಾದ "ವೀರಶೈವ ಮತವು ಹೇಳಲ್ಪಟ್ಟಿದೆ." ಶಿವರೂಪವಾದ ವಿದ್ಯೆಯಲ್ಲಿ ಯಾರು ವಿಶೇಷವಾಗಿ ರಮಿಸುತ್ತಾರೆಯೋ ಅಂತಹ ಭಾಗ್ಯಶಾಲಿಗಳು "ವೀರಶೈವ"ರೆಂಬುದಾಗಿ ಸ್ಮರಿಸಲ್ಪಟ್ಟಿರುತ್ತಾರೆ. "ವೀ" ಶಬ್ಧದಿಂದ ಶಿವ ಮತ್ತು ಜೀವರ ಐಕ್ಯವನ್ನು (ಏಕತ್ವವನ್ನು) ಬೋಧಿಸುವ 'ವಿದ್ಯೆ'ಯು ಹೇಳಲ್ಪಡುತ್ತದೆ. ಆ 'ವಿದ್ಯೆ'ಯಲ್ಲಿ

ಯಾದ ಶಿವಭಕ್ತರು ರಮಿಸುವರೋ (ಆನಂದವನ್ನು) ಪಡುತ್ತಾರೆಯೋ, ಅವರು ವೀರಶೈವರೆಂದು ಕರೆಯಲ್ಪಡುತ್ತಾರೆ. ಯಾವ ಕಾರಣದಿಂದ ಈ 'ವಿದ್ಯೆ'ಯಲ್ಲಿ ರಮಿಸುವನೋ ಹೇಯವಾದ 'ಮಾಯೆ'ಯನ್ನು ನಾಯಿಯಂತೆ ತ್ಯಾಗಮಾಡುವನೋ ಈ ರೀತಿಯಾದ ನಿರ್ವಚನದಿಂದ (ನಿರುಕ್ತಿ) 'ವೀರ ಮಾಹೇಶ್ವರ'ನೆಂದು ಸ್ಮರಿಸಲ್ಪಡುತ್ತಾನೆ. ವೇದಾಂತ (ಉಪನಿಷದ್) ದಿಂದ ಉತ್ಪನ್ನವಾಗಿ; ಯಾವ ಜ್ಞಾನವಿದೆಯೋ ಅದು 'ವಿದ್ಯೆ'ಯೆಂದು ಹೇಳಲ್ಪಡುತ್ತದೆ. ಆ'ವಿದ್ಯೆ'ಯಲ್ಲಿ ಯಾರು ರವಿಸುತ್ತಾರೆಯೋ ಅವರು 'ವೀರ' ಎಂದು ಹೇಳಿಸಿಕೊಳ್ಳುವರು." (ಸಿಶಿ 5–1 ರಿಂದ 18) ಇಲ್ಲಿ ಪ್ರಮುಖವಾಗಿ ವಿಚಾರ ಈ "ವೀರಶೈವ ಮತ"ದ ಸಿದ್ಧಾಂತದಲ್ಲಿ ಪ್ರತಿಪಾದಿತವಾಗಿರುವ 'ಷಟ್‌ಸ್ಥಲ ಸಿದ್ಧಾಂತ' ನಿರೂಪಣೆಯಾಗಿದೆ. ಈ ಷಟ್‌ಸ್ಥಲ ಸಿದ್ಧಾಂತವು ಹೇಗೆ ಸಾಧಕನು ತನ್ನ ದೇಹದಲ್ಲಿರುವ ಎಲ್ಲಾ ಶಕ್ತಿಗಳನ್ನು ಅವಿಷ್ಕಾರ ಮಾಡಿಕೊಂಡು ಕೊನೆಯಲ್ಲಿ ಅಂದರೆ ಅಂತ್ಯದಲ್ಲಿ ಹೇಗೆ "ಅಖಂಡ ಚೈತನ್ಯ" ಸ್ವರೂಪಿಯೇ ಆಗುತ್ತಾನೆ ಎಂಬ ವಿಚಾರವನ್ನು 101 ಸ್ಥಲಗಳಲ್ಲಿ ಪ್ರತಿಪಾದಿಸುತ್ತದೆ. (ಷಡುಸ್ಥಲ ಸಿದ್ಧಾಂತ ಸ್ವರೂಪದಲ್ಲಿ ಪ್ರತಿಪಾದಿಸುತ್ತದೆ) ಈ ಅಖಂಡ ಚೈತನ್ಯವನ್ನು 'ಸ್ವ' ಸ್ವರೂಪವನ್ನಾಗಿ ಪಡೆಯುವ ಕ್ರಮಗಳ ವಿವರಗಳನ್ನು ಶ್ರೀ ಸಿದ್ಧಾಂತ ಶಿಖಾಮಣಿಗ್ರಂಥ 'ಶಾಸ್ತ್ರ' ಸ್ವರೂಪದಲ್ಲಿ

ಪ್ರತಿಪಾದಿಸಿದರೆ, ಅದೇ ವಿಚಾರಗಳನ್ನು ಬಸವಾದಿ ಶರಣರ ವಚನ ವಾಙ್ಮಯವು 'ಅನುಭಾವ' ಸ್ವರೂಪದಲ್ಲಿ ಪ್ರತಿಪಾದಿಸುತ್ತದೆ. ಅನೇಕ ವಚನಗಳಲ್ಲಿ ಬಸವಾದಿ ಶರಣರು ತಾವು ಷಡುಸ್ಥಲ ಸಿದ್ಧಾಂತವನ್ನು ತಿಳಿದು ಆಚರಿಸಿ, ಇಷ್ಟ ಲಿಂಗೋಪಾಸನೆಯ ಮೂಲಕ 'ಅನುಭಾವ' ಪಡೆದು ತಮ್ಮ ಅನುಭಾವಗಳನ್ನು ದಾಕಲಾತಿ ಮಾಡಿದ್ದೇವೆ ಎಂದು ಹೇಳಿಕೊಂಡಿದ್ದಾರೆ. ಈಗ 'ಈ' ಪ್ರಬಂಧದಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿನ 'ಶಾಸ್ತ್ರ' ಸ್ವರೂಪ ನಿರೂಪಣೆಗಳನ್ನು ಹಾಗೂ ಬಸವಾದಿ ಶರಣರ ವಚನಗಳಲ್ಲಿನ 'ಅನುಭಾವ'ಗಳನ್ನು ಪರಸ್ಪರ ಅಧ್ಯಯನ ಮಾಡಿ ಪ್ರತಿಪಾದನೆಗಳನ್ನು ಮಾಡುತ್ತಿರುವುದರಿಂದ, ಹಾಗೂ 'ಶಾಸ್ತ್ರ' ಹಾಗೂ 'ಅನುಭಾವ'ಗಳನ್ನು ಪರಸ್ಪರ ಅಧ್ಯಯನ ಮಾಡಲು 'ದಶ–ಚಕ್ರ'ಗಳ ಪ್ರತಿಪಾದಿಸಿದ ಹಿನ್ನೆಲಗಳಲಲಿ; 36 ತತ್ತ್ವಗಳ ಪ್ರತಿಪಾದನೆ, ಪೌರಾಣಿಕ ಹೆಸರುಗಳ

## Page 41

ಗುಣಧರ್ಮಗಳ ಸಾಂಕೇತಿಕ ನಿರೂಪಣೆ; ಪ್ರಜ್ಞಾ ವಿಶೇಷಗಳ ನಿರೂಪಣೆ, ಲಿಂಗತತ್ತ್ವದ ಸ್ವರೂಪಗಳು ಹಾಗೂ ಷಟ್ ಸ್ಥಲ ಸಿದ್ಧಾಂತದ ತಿಳುವಳಿಕೆ, ಅನ್ವಯ, ಸಾಧನೆಗಳನ್ನು ಅನುಸರಿಸುತ್ತಿರುವುದರಿಂದ ಈ ಪ್ರಬಂಧದ ವಿಮರ್ಶಾತ್ಮಕ ತಿಳುವಳಿಕೆ, 'ಇಷ್ಟಲಿಂಗೋಪಾಸನೆ'ಯ ಮೂಲಕ 'ಲಿಂಗಾಂಗ ಸಾಮರಸ್ಯ'ವನ್ನು ಪಡೆಯುವ ಮಾರ್ಗಗಳನ್ನು ಯಾರೇ ಬೇಕಾದರೂ ತಿಳಿಯಬಹುದಾಗಿದೆ. ಈ ಹಿನ್ನೆಲೆಯಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವು 'ಷಟ್‌ಸ್ಥಲ ಸಿದ್ಧಾಂತ' ನಿರೂಪಣೆಯನ್ನು 'ವೀರಶೈವ' ಮತದ ಹಿನ್ನೆಲೆಯಲ್ಲಿ ಮಾಡುತ್ತದೆ ಎಂಬ ವಿಚಾರವನ್ನು ಇಲ್ಲಿ ವಿಷಧೀಕರಣಗಳಿಗೆ ತರಲಾಗುತ್ತದೆ. ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಮುಂದುವರೆದಂತೆ ಈ ರೀತಿಯ ನಿರೂಪಣೆಗಳಿವೆ. "ಶೈವ ('ವೀರಶೈವ") ರಿಂದ ಮತ್ತು ಮಹೇಶ್ವರ ('ವೀರ ಮಾಹೇಶ್ವರ') ರಿಂದ ಮಾಡಲ್ಪಡುವುದಕ್ಕೆ ಕ್ರಿಯೆಯು (ಇಷ್ಟಲಿಂಗೋಪಾಸನೆಯು) ಕ್ರಮವಾಗಿ ಅಂತರಂಗ ಮತ್ತು ಬಹಿರಂಗದ್ದು ಎಂದು ತಿಳಿದುಕೊಳ್ಳಬೇಕು. 'ಶಿವ' ಮತ್ತು 'ಮಹೇಶ್ವರ' ಇವರಿರ್ವರಲ್ಲಿ ಪರಸ್ಪರ ಭೇದವಿರುವುದಿಲ್ಲ. (ಏಕಾಂತದಲ್ಲಿ ಇಷ್ಟಲಿಂಗ ಪೂಜೆ ಮಾಡುವವರು ವೀರಶೈವರಾದರೆ, ಜನರಿಗೆ ಮಾರ್ಗದರ್ಶನ ಮಾಡುವುದಕ್ಕಾಗಿ ಬಹಿರಂಗದಲ್ಲಿ ಇಷ್ಟಲಿಂಗ, ಪೂಜೆಯನ್ನು ಮಾಡುವವರು ವೀರ ಮಾಹೇಶ್ವರರೆಂದು ತಿಳಿಯಲಾಗಿದೆ.) 'ಶಿವ' ಮತ್ತು 'ಮಹೇಶ್ವರರು' ಹೇಗೆ ಭಿನ್ನರಲ್ಲವೋ ಅದರಂತೆ ವೀರಶೈವರು ಮತ್ತು ವೀರ ಮಹೇಶ್ವರರೂ ಸಹ ಪರಸ್ಪರ ಭಿನ್ನರಾಗಿರುವುದಿಲ್ಲ. ಶಿವನನ್ನು ಆಶ್ರಯಿಸುವವರಲ್ಲಿ ಯಾವ ಮನುಷ್ಯರು ಜ್ಞಾನ ಯಜ್ಞದಲ್ಲಿ ತತ್ಪರರಾದವರು ಈ ಭೂಮಿಯೊಳಗೆ ವೀರ ಮಾಹೇಶ್ವರರೆಂದು

ಪ್ರಸಿದ್ಧರಾಗಿರುವರು. ಆದ್ದರಿಂದ 'ವೀರಶೈವ'ರು ಅಂತರಂಗದಲ್ಲಿ ಶಿವಲಿಂಗಾರ್ಚನೆಯನ್ನು ಮತ್ತು 'ವೀರಮಾಹೇಶ್ವ'ರರು ಬಹಿರಂಗದಲ್ಲಿ ಇಷ್ಟಲಿಂಗಾರ್ಚನೆಯನ್ನು ಮಾಡಿಕೊಳ್ಳುವರು. (ಈ ರೀತಿಯಲ್ಲಿ ವೀರಶೈವರು, ವೀರಮಾಹೇಶ್ವರರಿಬ್ಬರೂ ಜ್ಞಾನಿಗಳಾಗಿ ಅನುಭಾವಿಗಳಾದರೂ ವೀರಶೈವರು ಜ್ಞಾನಿಯಾಗಿ ತನ್ನ ಪಾಡಿಗೆ ತಾನು ಇರುತ್ತಾನೆ. ಆದರೆ 'ವೀರ–

ಮಾಹೇಶ್ವರನು ತನ್ನ ಅನುಭಾವ ಜ್ಞಾನವನ್ನು ಜಗತ್ತಿಗೆ ಹಂಚಲು ಕ್ರಿಯಾ ಪ್ರಧಾನವಾಗಿರುತ್ತಾನೆ.) ಸ್ಥಲಗಳ ಭೇದದಿಂದ 'ಭಕ್ತ' 'ಮಾಹೇಶ್ವರಾದಿ' ವ್ಯವಹಾರದಿಂದ 'ವೀರಶೈವರು' ಆರು ವಿಧವಾಗಿದ್ದರೆ, (ಷಡ್ಬೇಧಾ) ಎಂದು ಶಾಸ್ತ್ರ ಪಾರಂಗತರು ಹೇಳುತ್ತಾರೆ. 'ವೀರಶೈವ'ರ ಶಾಸ್ತ್ರವು 'ಸ್ಥಲ'ಭೇದದಿಂದ ಮತ್ತು ಆಯಾ 'ಸ್ಥಲಗಳ ಧರ್ಮಭೇದ'ದಿಂದ ಅಧಿಕಾರಿ ಭೇದದಿಂದ ಆರು ಪ್ರಕಾರವಾಗುತ್ತದೆ. ಮೊದಲನೆಯದು 'ಭಕ್ತಸ್ಥಲ'ವೆಂದು ಹೇಳಲ್ಪಡುತ್ತದೆ. ಅನಂತರ 'ಮಾಹೇಶ್ವರ ಸ್ಥಲ'ವು, ಮತ್ತೊಂದು 'ಪ್ರಸಾದಿಸ್ಥಲ'ವು. ಅನಂತರ 'ಪ್ರಾಣಲಿಂಗಿ ಸ್ಥಲ'ವು; ಆಮೇಲೆ 'ಶರಣಸ್ಥಲ'ವು. ಆರನೆಯದು 'ಐಕ್ಯ' ಸ್ಥಲ'ವೆಂಬುದಾಗಿ ಸಮ್ಮತವಾಗಿದೆ." (ಸಿ.ಶಿ. 5–19 ರಿಂದ 24) ಇವುಗಳಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಕ್ರಮವಾಗಿ 15, 9, 7, 5, 4, 4 ಸ್ಥಲಗಳು ಮೇಲಿನ ಷಟ್‌ಸ್ಥಲ (ಲಿಂಗಸ್ಥಲಗಳಿಗೆ) ಅನ್ವಯವಾಗಿದ್ದು; ಅವು ಒಟ್ಟು 44 ಲಿಂಗ ಸ್ಥಲಗಳು ಪ್ರತಿಪಾದಿತವಾಗಿದೆ. ಅದೇ ರೀತಿಯಲ್ಲಿ ಲಿಂತಸ್ಥಲದ ಭಕ್ತಿ ಸ್ಥಲ, ಲಿಂಗಸ್ಥಲದ ಮಾಹೇಶ್ವರ ಸ್ಥಲ, ಲಿಂಗಸ್ಥಲದ ಪ್ರಸಾದಿ ಸ್ಥಲ, ಲಿಂಗಸ್ಥಲದ ಪ್ರಾಣಲಿಂಗಿ ಸ್ಥಲ, ಲಿಂಗಸ್ಥಲದ ಶರಣಸ್ಥಲ, ಲಿಂಗಸ್ಥಲದ ಐಕ್ಯ ಸ್ಥಲವೆಂದು; ಕ್ರಮವಾಗಿ 9, 9, 9, 9, 12, 9 ಒಟ್ಟು "57" ಲಿಂಗಸ್ಥಲ"ಗಳು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಪ್ರತಿಪಾದಿತವಾಗಿದೆ. ಹೀಗಾಗಿ ಗ್ರಂಥದಲ್ಲಿ ಒಟ್ಟು 44 ಲಿಂಗಸ್ಥಲ ಹಾಗೂ 57 ಲಿಂಗಸ್ಥಲಗಳು, ಷಡುಸ್ಥಲ ಸಿದ್ಧಾಂತವಾಗಿ ಪ್ರತಿಪಾದಿತವಾಗಿದೆ. 101 ಸ್ಥಲಗಳಲ್ಲಿನ ಪ್ರತಿಯೊಂದು ಸ್ಥಲವೂ 'ಶಾಸ್ತ್ರೀ'ಯವಾಗಿ ಕ್ರಮವಾಗಿ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಪ್ರತಿಪಾದಿತವಾಗಿದೆ. ಅಂದರೆ ಪ್ರತಿಯೊಂದು ಸ್ಥಲದ ಮೊದಲಲ್ಲಿ ಆ ಸ್ಥಲದ 'ಗುಣಲಕ್ಷಣಗಳ' ನಿರೂಪಣೆಯನ್ನು ಮಾಡಿ **(Definition)** ತದನಂತರದಲ್ಲಿ ಆ ಸ್ಥಲದ ಸಂಪೂರ್ಣ ಪ್ರಮಾಣದ ವಿವರಗಳನ್ನು ಕೊಡಲಾಗಿದೆ. ಹೀಗೆ 101 ಸ್ಥಲವೂ ಸಹ ನಿರೂಪಿಸಲಾಗಿರುವುದರಿಂದ ಷಡುಸ್ಥಲ ಸಿದ್ಧಾಂತವನ್ನು ಒಟ್ಟಾರೆ ಗ್ರಹಿಸಲು ಅನುಕೂಲವಾಗುತ್ತದೆ. ಸಾಮಾನ್ಯವಾಗಿ ಯಾವುದೇ ವೈಜ್ಞಾನಿಕ ವಿಷಯದಲ್ಲಿ ಇದ್ದು; ಅದೆರಡರ ಮೂಲಕ ಆ ವಿಷಯವನ್ನು

ಗ್ರಹಿಕೆಗೆ ಬೋಧಿಸಲಾಗುವುದು. ಅದೇ ರೀತಿಯಲ್ಲಿ "ಷಡುಸ್ಥಲ ಸಿದ್ಧಾಂತ"ವನ್ನು **Theory** (ಶಾಸ್ತ್ರ) **Practicals** ('ಅನುಭಾವ') ಸ್ವರೂಪದಲ್ಲಿ ಈ ಪ್ರಬಂಧದಲ್ಲಿ ವಿವರಿಸಲಾಗುವುದು. ಈ 'ಷಡಸ್ಥಲ ಸಿದ್ಧಾಂತ'ವನ್ನು ಸಾಧಕನು ಆಚರಿಸುವಾಗ, ಅವನು ತನ್ನ ಆಧ್ಯಾತ್ಮಿಕ ಆವರಣಗಳನ್ನು **(protectious)** 'ಅಷ್ಟಾವರಣ'ಗಳ ಆಚರಣೆಗಳ ಮೂಲಕವಾಗಿಯೂ, ಮತ್ತು ತನ್ನ 'ಪಂಚಾಚಾರ'ಗಳ ಆವರಣಗಳನ್ನು ಸಾಮಾಜಿಕವಾಗಿಯೂ ಆಚರಿಸುತ್ತಾನೆ. ಈ ಎಲ್ಲಾ 'ಅಷ್ಟಾವರಣ' ಮತ್ತು 'ಪಂಚಾಚಾರ'ಗಳ ವಿವರಗಳು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ 'ಷಡುಸ್ಥಲ ಸಿದ್ಧಾಂತ' ಪ್ರತಿಪಾದನೆಗಳಲ್ಲಿ 'ಅಂತರ್ಗತ'ವಾಗಿ ನಿರೂಪಿತವಾಗಿವೆ. ಈ ಎಲ್ಲಾ ವಿವರಣೆಗಳನ್ನು ಸಾಧಕನ ದೇಹದಲ್ಲಿನ 'ದಶ–ಚಕ್ರ'ಗಳಿಗೆ ಅನ್ವಯಮಾಡಿ, ಸಾಧನೆ ಹಾಗೂ ಸಿದ್ಧಿ ಮಾರ್ಗಗಳನ್ನು ತಿಳಿಯಬೇಕಾಗುತ್ತದೆ. 'ದಶ–ಚಕ್ರ'ಗಳ ಹಿನ್ನೆಲೆಯಲ್ಲಿ ಈ ಸ್ಥಾನಮಾರ್ಗವನ್ನು 'ಶಾಸ್ತ್ರ' ಸ್ವರೂಪದಲ್ಲೂ ಹಾಗೂ 'ಅನುಭಾವ'ದ ಸ್ವರೂಪದಲ್ಲೂ ವಿವರವಾಗಿ ತಿಳಿಯಬಹುದಾಗಿದೆ. ಮತ್ತೊಂದು ಪ್ರಮುಖವಾದ ಆಯಾಮದ ಚಿಂತನೆಗಳನ್ನು 'ದಶ–ಚಕ್ರ'ಗಳ ವಿಚಾರದಲ್ಲಿ

ಇಲ್ಲಿ ನಿರೂಪಿಸಬೇಕಾಗುತ್ತದೆ. ಆಧ್ಯಾತ್ಮಿಕತೆಯ ತಿಳುವಳಿಕೆಗಳು, ಸಾಧನೆಗಳು, ಸಿದ್ಧಿಗಳೆಲ್ಲಾ ಸಾಧಕನ ದೇಹದಲ್ಲೇ ನೆಡೆದರೆ, ಅದು ನಿಜವಾದ 'ನೇರವಾದ' ಆಧ್ಯಾತ್ಮಿಕತೆ'ಯಾಗುತ್ತದೆ. ಇದಲ್ಲದೆ ಈ ಚಿಂತನೆ, ಸಾಧನೆಯ ವಿವರಗಳನ್ನು ಸಾಧಕನ ದೇಹದ ಹೊರಗೆ ನೆಡೆದರೆ ಅದು 'ಪರೋಕ್ಷ ಸಾಧಕನ ಆಧ್ಯಾತ್ಮಕತೆ'ಯಾಗುತ್ತದೆ. ಅಂದರೆ ದೇವಸ್ಥಾನ, ಪುಣ್ಯ ಕ್ಷೇತ್ರ, ಮುಂತಾದ ಸ್ಥಲಗಳಲ್ಲಿ, ಬಾಹ್ಯ ಯಂತ್ರ, ತಂತ್ರ ಮಾರ್ಗಗಳಲ್ಲಿ ಮತ್ತು ಹೊರಗಿನ ಉಪಾಸನೆಗಳ ಮೂಲದಲ್ಲಿ ಸಾಧಕನ ತಿಳುವಳಿಕೆ ಹಾಗೂ ಸಾಧನೆಗಳು ನೆಡೆದರೆ ಅದು ಬಾಹ್ಯ ಪರೋಕ್ಷ ಆಧ್ಯಾತ್ಮಕತೆಗಳಾಗುತ್ತವೆ. ಇದೇ ಅನೇಕ ರೀತಿಯ ಜೀವಗಳ ಉಪಾಸನೆ–

********************************************************************************

ಇಲ್ಲಿಯ ವರೆವಿಗೂ ಮೇಲ್ ಮಾಡಿದೆ. **07/03/2015**

************************************************************************************

ಯಾಗಿವೆ. ಬಾಹ್ಯ ಉಪಾಸನೆಗಳನ್ನು ಸಾಧಕನು ತನ್ನ ಅಂತರಂಗದ 'ದಶ–ಚಕ್ರ'ಗಳಿಗೆ ಅನ್ವಯ ಮಾಡಿ ಕೊಂಡರೆ ಮಾತ್ರ ಅದು ಅವನಿಗೆ ನೇರವಾದ ಆಧ್ಯಾತ್ಮಿಕತೆ'ಯಾಗುತ್ತದೆ. ಯಾವುದೇ ಸಾಧಕನು ನಿರಂತರವಾಗಿ ಬಾಹ್ಯ ಮುಖಿಯಾಗಿದ್ದರೆ, ಅವನಿಗೆ ಆಧ್ಯಾತ್ಮಿಕತೆಯ ಪರಿಣಾಮಕಾರಿಯಾದ ಫಲಗಳು ದೊರಕುವುದು ಕಷ್ಟ ಸಾಧ್ಯ ಆದ್ದರಿಂದ ಆಧ್ಯಾತ್ಮಿಕವಾಗಿ ಸಾಧಕನಿಗೆ 'ದೈವ ಸಾಕ್ಷಾತ್ಕಾರಗಳ 'ನೆಲೆ'ಗಳಲ್ಲಿ ಅವಿಷ್ಕಾರವಾಗಬೇಕಾದರೆ ಅವನು ತನ್ನೆಲ್ಲಾ ಬಹಿರಂಗದ ಉಪಾಸನಾ ಪ್ರಕ್ರಿಯೆಗಳನ್ನು ತನ್ನ ದೇಹದಲ್ಲಿನ 'ದಶ–ಚಕ್ರ'ಗಳ ಅನ್ವಯದಲ್ಲಿ ಆಚರಿಸಿದಾಗ ಮಾತ್ರ ಅವನಿಗೆ ಅವನ ಸಾಧನೆಯ ಫಲಗಳು ದೊರಕುತ್ತವೆ. ಆದರೆ ಬಹುತೇಕ ವೇಳೆ 'ಸಾಧಕರು' ತಮ್ಮ ಆಧ್ಯಾತ್ಮಿಕ ಚಟುವಟಿಕೆಗಳಾದ ಉಪಾಸನೆ, ಸಾಧನೆಗಳನ್ನು ಬಾಹ್ಯವಾಗಿಯೇ ಮಾಡುತ್ತಾ; ನಿರಂತರವಾಗಿ ಅಂತರಂಗದ ದಶ–ಚಕ್ರಗಳ ಅನ್ವಯಗಳಿಗೆ ಮನಸ್ಸೇ ಕೊಡದೆ, ಆಧ್ಯಾತ್ಮಿಕವಾಗಿ ಯಾವುದೇ ಪರಿಣಾಮಕಾರಿ ಫಲಗಳಿಲ್ಲದೆ ಕಾಲ ವ್ಯರ್ಥ ಮಾಡುತ್ತಿದ್ದಾರೆ. ಈ ನಿಟ್ಟಿನಲ್ಲಿ 'ವೀರಶೈವ ಮತ'ದಲ್ಲಿ ಪ್ರತಿಪಾದಿತವಾಗಿರುವ 'ಇಷ್ಟ ಲಿಂಗೋಪಾಸನೆ'ಯು, ತನ್ನ ಉಪಾಸನಾಕ್ರಮಗಳನ್ನು ಹಾಗೂ ಬಹಿರಂಗದ ಆಚರಣೆಗಳನ್ನು ಖಂಡಿತವಾಗಿಯೂ ಸಾಧಕನ ಅಂತರಂಗದ 'ದಶ–ಚಕ್ರ'ಗಳಿಗೆ ಅನ್ವಯ ಮಾಡಿಕೊಂಡು ಆಚರಿಸುವ ಪ್ರಕ್ರಿಯೆಗಳಾಗಿವೆ. ಆದ್ದರಿಂದ ಈ ಕ್ರಮದ ಉಪಾಸನೆಗಳು ನೇರವಾದ ಆಧ್ಯಾತ್ಮಿಕತೆಯಾಗಿದ್ದು, ಪರಿಪೂರ್ಣ ಪ್ರಮಾಣದ ಫಲಗಳನ್ನು ಕೊಡುತ್ತದೆ. ಈ ಬಹಿರಂಗ – ಅಂತರಂಗದ ಅನ್ವಯಗಳು ಇಷ್ಟಲಿಂಗೋಪಾಸನಾ ಪ್ರಕ್ರಿಯೆಗಳಲ್ಲಿ 'ಸಹಜ'ವಾಗಿಯೇ ನೆಡೆಯುತ್ತದೆ. ಅದೇ ಸರಿಯಾದ ಸಾಧನ ಕ್ರಮಗಳಾಗಿದೆ. ಅದೇ ಉಪಾಸನೆಯಾಗಿದೆ. ಈ ನೆಲೆಯಲ್ಲಿ ಸಾಧಕನ ದೇಹದಲ್ಲಿನ 'ದಶ–ಚಕ್ರ'ಗಳ ಪ್ರಾಮುಖ್ಯತೆಯನ್ನು ಸಾಧಕನು ಗ್ರಹಿಸಬೇಕು. ಅನೇಕ ವಿಧವಾದ ಸಿದ್ಧಾಂತ, ಮತ, ಧರ್ಮ, ಉಪಾಸನಾ ಕ್ರಮಗಳನ್ನು ಸಾಧಕನ ದೇಹದಲ್ಲಿನ 'ದಶ–ಚಕ್ರ'ಗಳನ್ನು ಹಿನ್ನೆಲೆಯಲ್ಲಿ ಗ್ರಹಿಸಿದರೆ, ಆಗ ಪ್ರತಿಯೊಂದರ ಅನುಕೂಲ, ಅನಾನುಕೂಲಗಳು, ಗ್ರಹಿಕೆಗೆ ಬರುತ್ತವೆ. ಈ ರೀತಿಯಲ್ಲಿ ಸಾಧಕನು ತನಗೆ ಬೇಕಾದ ಪದ್ಧತಿಯನ್ನು ದೈವಸಾಕ್ಷಾತ್ಕಾರಕ್ಕೆ ಆರಿಸಿಕೊಳ್ಳಬೇಕು.

ಸಿದ್ಧಾಂತ ತಂತ್ರದ ಪ್ರಮುಖವಾದ ಭಾಗವೇ ವೀರಶೈವ ಮತ ಪರವಾದ ಷಟ್‌ಸ್ಥಲ ಸಿದ್ಧಾಂತವಾಗಿದೆ. ಈಗಾಗಲೇ ಷಟ್‌ಲಿಂಗಸ್ಥಲ ಷಟ್‌ಲಿಂಗ ಸ್ಥಲಗಳ ವಿವರಣೆಯನ್ನು ಅವುಗಳ ನಿರೂಪಣೆಯನ್ನು **44** ಲಿಂಗಸ್ಥಲಗಳಾಗಿ **57** ಲಿಂಗಸ್ಥಲಗಳಾಗಿ ಒಟ್ಟು **101** ಸ್ಥಲಗಳ ನೆಲೆಗಳಲ್ಲಿ ಪ್ರತಿಪಾದನೆಯಾಗಿರುವುದನ್ನು ಶ್ರೀ

ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಲಾಗಿದೆ ಎಂಬ ವಿಚಾರವನ್ನು ನಿರೂಪಿಸಲಾಗಿದೆ. 'ಶಾಸ್ತ್ರ' ಸ್ವರೂಪನ, ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ 'ಷಟ್‌ಸ್ಥಲ ಸಿದ್ಧಾಂತ'ವು ನಿರೂಪಿತವಾಗಿದ್ದು: ಅದು 28 ಶಿವಾಗಮದಳಸಾರವಾಗಿ ಪ್ರತಿಪಾದನೆಯಾಗಿದೆ. ಆದರೆ ಅದೇ 28 ಶಿವಾಗಮಗಳ ಆಚರಣಾ ಸಂಪ್ರದಾಯದಲ್ಲಿ ಬಂದ 'ಷಟ್‌ಸ್ಥಲ ಸಿದ್ಧಾಂತ'ವನ್ನು 'ತಿಳಿದು', 'ಆಚರಿಸಿ' 'ಅನುಭಾವ' 'ಮಾಡಿಕೊಂಡು' ಪಂಥ (ಧರ್ಮ) ನಿರಪೇಕ್ಷ ನೆಲೆಯಲ್ಲಿ ಪ್ರತಿಪಾದಿಸಿರುವುದು (ಪಂಚಾರಸ್ಥಲಗಳಲ್ಲಿ) ದೇವ ಬಸವಾದಿ ಶರಣರ ವಚನ ವಾಙ್ಮಯವಾಗಿದೆ. ಈ ಪಂಚಾಚಾರಸ್ಥಲಗಳಾದ, ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದಗಳು ಪಂಥ ನಿರಪೇಕ್ಷವಾಗುವುದಕ್ಕೆ ಕಾರಣ. ಇವುಗಳ ವಿಚಾರಗಳು ಎಲ್ಲ ಧರ್ಮಗಳಲ್ಲೂ ಇದೆ. ಗುರುವೆಂದರೆ ನಿರಾಕಾರ ಪರಮಾತ್ಮ (ನಿಷ್ಕಲ, ಶೂನ್ಯ, ನಿಃಶೂನ್ಯ, ಸಹಜ ಸ್ಥಿತಿಗಳಾದ ಪರಶಿವ ಸ್ಥಿತಿಯಾಗಿದೆ) ಜ್ಞಾನಿ ಜಂಗಮ ಅಥವಾ ಜೀವಾತ್ಮ ಲಿಂಗಮಃ ಪಾದೋದಕವೆಂದರೆ ಸಾಧಕನಿಗೆ ಆಗುವ ಶಿವಸ್ವರೂಪಿ ಜ್ಞಾನಿಗೆ ಪರಿಚಯ (ದೀಕ್ಷಾ ಸಂದರ್ಭದಿಂದ ಉಂಟಾಗಿರಬಹುದು; ಇಲ್ಲಿ ದೀಕ್ಷಾ ಸಂದರ್ಭಕ್ಕೆ ಹೊರತಾದುದಾಗಿರಬಹುದು) ಹಾಗೆಯೇ ಪ್ರಸಾದವೇ ಅಂತಹ ಶಿವ ಸ್ವರೂಪಿ ಜ್ಞಾನಿಯ ಪರಿಚಯ, ಶಿಷ್ಯ, ಶುಶ್ರೋಷಾ, ಸೇವ್ಯ ಮಾಡಿದ ಮೇಲೆ ಸಾಧಕನಿಗೆ ದೊರೆಯುವ ಆದಿ, ಅಂತ್ಯ, ಸೇವ್ಯ, ಪ್ರಸಾಧಗಳು. ಈ ಸೃಷ್ಟಿ ಕಾರ್ಯ ಹೇಗಾಯಿತು ಸಾಧಕ ಇದರ ಭಾಗ ಹೇಗಾದ, ಎಂಬುದು ಆದಿಪ್ರಸಾದ; ಈ ಸೃಷ್ಟಿ ಹೇಗೆ ಲಯವಾಗುತ್ತದೆ ಎಂಬ ತಿಳುವಳಿಕೆ. ಅಂತ್ಯ ಪ್ರಸಾದ, ಮತ್ತು ಶಿವನ ಸ್ವರೂಪ ಹೇಗಿದೆ ಎಂದು ತಿಳಿಯುವುದೇ ಸೇಪ್ಯ ಪ್ರಸಾದ. ಹೀಗೆ ಗುರು, ಲಿಂಗ, ಜಂಗಮ,

ಪಾದೋದಕ, ಪ್ರಸಾಧಗಳು, ವೀರಶೈವ ಮತದ ಷಟ್‌ಸ್ಥಲ ಸಿದ್ಧಾಂತದಲ್ಲಷ್ಟೇ ಅಲ್ಲದೆ ಜಗತ್ತಿನ ಎಲ್ಲಾ ಜಾಗತಿಕ ಧರ್ಮಗಳಲ್ಲೂ ಸಹ ಇರುವುದರಿಂದ ಬಸವಾದಿ ಶರಣರ ವಚನಗಳು ಕೇವಲ 'ಪಂಚಾಚಾರ ಸ್ಥಲಗಳ' ನೆಲೆಗಳಲ್ಲೇ ಪ್ರತಿಪಾದನೆಯಾಗಿರುವುದರಿಂದ ಬಸವಾದಿ ಶರಣರ "ವಚನ ವಾಙ್ಮಯ"ವು ಜಗತ್ತಿನ ಎಲ್ಲಾ ಧರ್ಮಗಳಿಗೆ ಅನುಭಾವ (ಆಧ್ಯಾತ್ಮಿಕ) ಶಾಸ್ತ್ರವಾಗಿದೆ ಎಂದು ಧಾರಾಳವಾಗಿ ತಿಳಿಯಬಹುದು. ಬಸವಾದಿ ಶರಣರ ವಚನ ವಾಙ್ಮಯವು ಮೂಲಭೂತ ನೆಲೆಯಲ್ಲಿ ಲಿಂಗತತ್ತ್ವದ ಹಿನ್ನೆಲೆಯಲ್ಲಿ ಲಿಂಗತತ್ತ್ವದ ಸಾಧನೆಯನ್ನು; ಹಾಗೂ ಲಿಂಗತತ್ತ್ವದ ಹಿನ್ನೆಲೆಯಲ್ಲಿ ಸಾಮಾಜಿಕ ನ್ಯಾಯಗಳನ್ನು ಪ್ರತಿಪಾದಿಸುತ್ತದೆ. ಆದ್ದರಿಂದ ಈ ಬಸವಾದಿ ಶರಣರ ವಚನ ವಾಙ್ಮಯದಲ್ಲಿ ಪ್ರತಿಪಾದಿತವಾಗಿರುವ ವಿಚಾರಗಳನ್ನು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಪ್ರತಿಪಾದಿತವಾಗಿರುವ ಷಟ್‌ಸ್ಥಲ ಸಿದ್ಧಾಂತವು 'ಶಾಸ್ತ್ರ' ಸ್ವರೂಪದಲ್ಲಿ ವಿವರಣೆಗಳನ್ನು ನೀಡಬೇಕಾಗುತ್ತದೆ. ಕಾರಣ ಒಂದೇ ನೆಲೆಯ ಮೂಲದಿಂದ ಶಾಸ್ತ್ರ ಹಾಗೂ ಅನುಭಾವಗಳು ಬಂದಿರುವುದರಿಂದ ಸಾಮಾನ್ಯವಾದ ಅರ್ಥದಲ್ಲಿ ಯಾವುದೇ ಶಾಸ್ತ್ರವು ಇದುವರೆವಿಗೆ ಬಂದಿರುವ, ಮುಂದೆ ಬರಬಹುದಾದಂತಹ ಅನುಭಾವಗಳನ್ನು **(Observatives facts)** ವಿವರಿಸಬೇಕಾಗುತ್ತದೆ. ಈ ನೆಲೆಯಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಪ್ರತಿಪಾದಿತವಾದ 'ಶಾಸ್ತ್ರ'ವನ್ನು (ಷಟ್‌ಸ್ಥಲ ಸಿದ್ಧಾಂತ ನಿರೂಪಣೆ, ಅಂತರ್ಗಡವಾದ ಅಷ್ಟಾವರಣ, ಪಂಚಾರಗಳ ನಿರೂಪಣೆ) ವಿಮರ್ಶೆಗೆ ಒಳಪಡಿಸಿ ಅಧ್ಯಯನ ಮಾಡಬೇಕಾಗುತ್ತದೆ. ಈ ಅಧ್ಯಯನದಲ್ಲಿ ಎರಡು ವಿಚಾರಗಳನ್ನು ಗಮನದಲ್ಲಿ ತೆಗೆದುಕೊಳ್ಳಬೇಕಾಗುತ್ತದೆ

1. ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿರುವ 101 ಸ್ಥಲಪ್ರತಿಪಾದಿತ ಷಟ್‌ಸ್ಥಲ ಸಿದ್ಧಾಂತ ಹಾಗೂ ಪಂಚಾಚಾರ ಸ್ಥಲಗಳಾದ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ ಇವುಗಳ ಸಂಬಂಧಗಳು ಹಾಗೂ
2. ಇಷ್ಟ ಲಿಂಗೋಪಾಸನಾ ನೆಲೆಯ 'ಇಷ್ಟಲಿಂಗ', 'ಪ್ರಾಣಲಿಂಗ', 'ಭಾಪಲಿಂಗ'ಗಳ ವಿವರಣೆಗಳು: 101 ಸ್ಥಲದ 'ಷಟ್‌ಸ್ಥಲ ಸಿದ್ಧಾಂತ'ದ ನೆಲೆಯಲ್ಲಿನ ಚಿಂತನೆಗಳು ಹಿನ್ನೆಲೆಯಲ್ಲಿ.

ಪುಟ 47

ಇದುವರೆವಿಗೆ ಈ ರೀತಿಯ ಅಧ್ಯಯನಗಳೂ ನಡೆಯದೇ ಇರುವುದರಿಂದ; ಈಗ ಈ ಅಧ್ಯಯನಗಳೂ ಪೂರ್ಣಗೊಂಡಿರುವುದರಿಂದ (1997 ರಿಂದ 2009) ಇಲ್ಲಿ ಈ ವಿಚಾರಗಳನ್ನು ಕ್ರಮವಾಗಿ ಪ್ರತಿಪಾದಿಸಲಾಗಿದೆ. ಈ ಅಧ್ಯಯನಗಳಿಗೆ ಪ್ರಸಿದ್ಧವಾದ ಕಾರಣ ಬಸವಾದಿ ಶರಣರ ವಚನಗಳಲ್ಲಿರುವ "ಲಿಂಗತತ್ತ್ವ"ದ ಸಾಧೆಯ ಎಲ್ಲಾ ವಿವರಣೆಗಳನ್ನು 'ಷಟ್‌ಸ್ಥಲ ಸಿದ್ಧಾಂತ'ದ ಹಿನ್ನೆಲೆಗಳಲ್ಲಿ ಪಡೆಯುವುದೇ ಆಗಿದೆ. ಈ ಕಾರಣಕ್ಕೆ ಆಧಾರವಾಗಿ ಬಸವಣ್ಣನವರ ಒಂದು ವಚನವನ್ನು ಇಲ್ಲಿ ವಿವಸಿಸಲಾಗಿದೆ.

| | |
|---|---|
| ವಚನ 1: (ಸಪ್ತಸೂತ್ರ ವಚನ)<br><br>2. ಸೃಷ್ಟಿ ಕಾರ್ಯದಲ್ಲಿ ಮೋಕ್ಷ ಕಾರ್ಯದ ಸ್ವರೂಪ<br><br>3. ಮೋಕ್ಷ ಮಾರ್ಗ<br><br>4. ಮೋಕ್ಷ ಮಾರ್ಗವಿಲ್ಲದ ಅಷ್ಟಸಿದ್ಧಿಗಳು<br>5. ಷಟ್ ಸ್ಥಲ ಸಿದ್ಧಾಮತ ಹಾಗೂ ಪಂಚಾಚಾರ ಸ್ಥಲ | ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗಂಗಳು ಭನಂಬಾಳದಲ್ಲಿ ತಿರುಗುತ್ತಿಪ್ಪಲ್ಲಿ ಅನಂತ ಕೋಟ್ಯಾನುಕೋಟಿ ಯುಗಂಗಳು ಮುಡಿದು ಹೋದವು. ಅನಂತ ಜಲ ಪ್ರಳಯಂಗಗಳು ಸುರಿದು ಹೋದವು. ಅನಂತ ಜಲಪ್ರಳಯಂಗಗಳು ಸುರಿದುಹೋದವು. ಹದಿನಾಲ್ಕು ಲೋಕಂಗಳೆಂಬ ಅನಂತಕೋಟಿ ಬ್ರಹ್ಮಾಂಡಗಳೆಲ್ಲಮಯವಾಗಿ ಹೋದವು. ಇದರೊಳಗೆ ಆವ ಲೋಕದಲ್ಲಿ ಆವಯುಗದಲ್ಲಿ ಪ್ರಾಣಲಿಂಗ, ಲಿಂಗ ಪ್ರಾಣವೆಂಬ ಭೇದವನರುಹಿದವರಾರು ಹೇಳಿ, ಗಂಗೆ ಗೌರೀವಲ್ಲಭರು ಮೊದಲಾದ ಅನಂತಕೋಟಿ ರುದ್ರಾಧಿಗಳೆಲ್ಲರೂ, ಪ್ರಾಣಲಿಂಗ ಸಂಬಂಧದ ಹೊಲಬನರಿಯದೆ ಅಣಿಮಾದಿ ಚತುರ್ವಿಧ ಫಲ ಪ್ರಾಪ್ತಿಗೆ ಒಳಗಾದರು. ಶಿವಾಚಾರದ ವಿಚಾರವನರಿಯದೆ ಜಗವುಕೆಟ್ಟು ಹೋದುದೆಂದು ಪರಮಪುರುಷಾರ್ಥ ಕಾರಣವಾಗಿ ಮರ್ತ್ಯದಲ್ಲಿ ಅವತರಿಸಿ, ಗುರು ಲಿಂಗ ಜಂಗಮ ಪಾದೋದಕ ಪ್ರಸಾದವೆಂಬ ಪಂಚಾಚಾರ ಸ್ಥಲವ ನೆಲೆಗೊಳಿಸಿ, ಷಡುಸ್ಥಲವೆಂಬ ಮಹಾನುಭಾವವಂಕರತಳಕವಾಗಿ ಸ್ಥಿರಗೊಳಿಸಿ, ಪ್ರಾಣಲಿಂಗ, ಲಿಂಗಪ್ರಾಣವೆಂಬ ಭೇದವೆನಗೆ ತಿಳಿಸು, ಎನ್ನ ಭ್ರಾಂತಿ ಸೂತಕವ ಬಿಡಿಸಿ, 'ಲಿಂಗೈಕ್ಯ'ವೆಂಬುದೆನಗೆ ತೋರಿಸದೆಯಾಗಿ ನಿನ್ನಿಂದಲಾನು ಸಂಗನ ಬಸವಣ್ಣನೆಂಬ ಹೆಸರುವಡೆದೆನು ಕೂಡಲಸಂಗಮ ದೇವರು ಸಂಗನ ಬಸವಣ್ಣನೆಂಬ ಹೆಸರುವಡೆದೆನ ಕೂಡಲ ಸಂಗಮ ದೇವರು ಸಾಕ್ಷಿಯಾಗಿ ಎನಗೆ ನೀನು ಪರಮಾರಾಧ್ಯ ಕಾಣಾ, ಚೆನ್ನಬಸವಣ್ಣ<br>– **ಬಸವಣ್ಣನವರು, ವಚನ 1160**<br>**ಪುಟ 318, ಸಮಗ್ರ ವಚನ ಸಂಪುಟ 1 ಕರ್ನಾಟಕ ಸರ್ಕಾರ 1993.** |

ಈ ವಚನದಲ್ಲಿ ಬಸವಣ್ಣನವರು, "ಷಡುಸ್ಥಲವೆಂಬ ಮಹಾನುಭಾವವಂ ಕರತಳಾ ಮಳಿಕವಾಗಿ ಸ್ಥಿತಗೊಳಿಸಿ; ಗುರು–ಲಿಂಗ ಜಂಗಮ ಪಾದೋದಕ ಪ್ರಸಾದವೆಂಬ ಪಂಚಾಚಾರಸ್ಥಲವ ನೆಲೆಗೊಳಿಸಿ, ಪ್ರಾಣಲಿಂಗವೆಂಬ ಭೇದವೆನಗೆ ತಿಳಿಸಿ, ಎನ್ನ ಭ್ರಾಂತಿಸೂತಕವ ಬಿಡಿಸಿ, 'ಲಿಂಗೈಕ್ಯ'ವೆಂಬುದೆನೆಗೆ ತೋರಿಕೆಯಾಗಿ" ಎಂದು ಪ್ರತಿಪಾದಿಸಿದ್ದಾರೆ. ಅಂದರೆ "ಪ್ರಾಣಲಿಂಗ," "ಲಿಂಗ ಪ್ರಾಣ"ದ ಭೇದವನ್ನು ತಿಳಿದು ಭ್ರಾಂತಿ ಸುತಕವನ್ನು ನಿವಾರಿಸಿಕೊಂಡು ಅಖಂಡ ಚೈತನ್ಯ ಸ್ವರೂಪಿಯೇ ಆಗುವ 'ಲಿಂಗೈಕ್ಯ' ಸ್ಥಿತಿಯನ್ನು ಪಂಚಾಚಾರಸ್ಥಲ ನೆಲೆಯಲ್ಲಿ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದಗಳನ್ನಾಗಿ ಷಡುಸ್ಥಲ ಸಿದ್ಧಾಂತವನ್ನು ಕರತಳಾಮಳಕವಾಗಿ ಸ್ಥಿತಗೊಳಿಸಿಕೊಂಡು ಆಚರಿಸುವ ಕ್ರಮವನ್ನು ಬಸವಣ್ಣನವರು ಪ್ರತಿಪಾದಿಸಿದ್ದಾರೆ. ಬಸವಾದಿ ಶರಣರ ಯಾವುದೇ ವಚನವನ್ನು ಪರಿಶೀಲಿಸಿದರೂ ಸಹ ಆ ವಚನವು ಗುರು, ಲಿಂಗ, ಜಂಗಮ, ಪಾದೋದಕ,

ಪ್ರಸಾದಗಳಾದ ಪಂಚಾಚಾರ ಸ್ಥಲಗಳ ನೆಲೆಗಳಲ್ಲೇ ಪ್ರತಿಪಾದಿತವಾಗಿರುವುದನ್ನು ಕಾಣಬಹುದಾಗಿದೆ. ಆದ್ದರಿಂದ ಬಸವಾದಿ ಶರಣರು ಷಡುಸ್ಥಲ ಸಿದ್ಧಾಂತವನ್ನು ಕರತಳಾಮಳಕವಾಗಿ ತಿಳಿದು, ಆಚರಿಸಿ ತಮ್ಮ 'ಅನುಭಾವ'ಗಳನ್ನು ಪಂಚಾಚಾರ ಸ್ಥಲಗಳ ನೆಲೆಯಲ್ಲಿ ತಮ್ಮ ವಚನಗಳಲ್ಲಿ ಪ್ರತಿಪಾದಿಸಿದ್ದಾರೆ ಎಂದು ತಿಳಿಯಬಹುದಾಗಿದೆ. ಇಲ್ಲಿ ವಚನದಲ್ಲಿ ಬಂದಿರುವ ಪ್ರಾಣಲಿಂಗ, ಲಿಂಗಪ್ರಾಣವೆಂದರೆ, ಪ್ರಾಣದಲ್ಲಿರುವ ಅಖಂಡ ಚೈತನ್ಯಾತ್ಮಕ ಶಕ್ತಿ, ಮತ್ತು ಅಖಂಡ ಚೈತನ್ಯಾತ್ಮಕ ಶಕ್ತಿ, ಪ್ರಾಣವಾಗಿರುವಿಕೆ ಎಂದು ತಿಳಿದು ಅವುಗಳಲ್ಲಿನ ಭೇದವನ್ನು ತಿಳಿಯಬೇಕಾದ ನಿಲುವು; ಅಂದರೆ ಅಖಂಡ ಚೈತನ್ಯಾತ್ಮಕ ಶಕ್ತಿ ಪ್ರಾಣವಾಗಿರುವಿಕೆ ಸೃಷ್ಟಿ ಕ್ರಮವಾದರೆ; ಪ್ರಾಣದಲ್ಲಿರುವ ಅಖಂಡ ಚೈತನ್ಯಾತ್ಮಕ ಶಕ್ತಿ ಸ್ವರೂಪದ ಅರ್ಥೈಸುವಿಕೆಯಿಂದ ಸಾಧಕನಿಗೆ ಮೋಕ್ಷ ಮಾರ್ಗದ ಸಾಕ್ಷಾತ್ಕಾರವಾಗುತ್ತದೆ. ಇವೆರಡೂ ಅತ್ಯಂತ ಪ್ರಮುಖವಾದ ಪ್ರಶ್ನೆಗಳಾಗುತ್ತದೆ. ಕಾರಣ ಸೃಷ್ಟಿಕಾರ್ಯದಲ್ಲಿ ಮೂಲ 'ಸಹಜ' ಸ್ವರೂಪದ ಲಿಂಗತತ್ತ್ವವೇ (ಅಖಂಡ ಚೈತನ್ಯತ್ಮಕ ಅಪ್ರಕಟಿತಶಕ್ತಿ ಸ್ವರೂಪವೇ) ಪರಿಣಾಮದಲ್ಲಿ ಈ ಸೃಷ್ಟಿ ಸ್ವರೂಪವನ್ನು ತಾಳಿ ಪ್ರಮುಖವಾಗಿ "ಪ್ರಾಣ" ಸ್ವರೂಪದಲ್ಲಿ ಅಸ್ಥಿತ್ವದಲ್ಲಿದೆ, ಅಂದರೆ, ಈ ಪ್ರಾಣವು; ಇವತ್ತಿನ ಸ್ಥಿತಿಯಲ್ಲಿ ಹೇಗಿದೆಯೋ, ಅದೇ ಸ್ವರೂಪದಲ್ಲಿ ಸೃಷ್ಟೀಕಾರ್ಯದಲ್ಲಿ ನಿರೂಪಿತಗೊಂಡಾಗಲೂ ಇತ್ತು. ಇವತ್ತಿನ ಒಬ್ಬ ಸಾಧಕನ ಶರೀರದಲ್ಲಿ ಅಸ್ಥಿತ್ವದಲ್ಲಿರುವ 'ಪ್ರಾಣವು, ಕೊಟ್ಯಾನುಕೋಟಿ ವರ್ಷಗಳ ಹಿಂದೆ ಇದ್ದ ಒಂದು ಮೀನಿನಲ್ಲೂ ಸಹ ಇದ್ದಿತು. ಅದು ಅಲ್ಲದೆ ಮತ್ತು ಕೋಟ್ಯಾನುಕೋಟಿ ವರ್ಷಗಳ ನಂತರದಲ್ಲಿ ಇರುವ ಜೀವಿಗಳಲ್ಲಿನ 'ಪ್ರಾಣ'ವೂ ಸಹ ಇದೇ ಆಗಿರುತ್ತದೆ. ಈ 'ಪ್ರಾಣ' ಅಸ್ಥಿತ್ವ ಅಸ್ಥಿತ್ವವನ್ನು ತಿಳಿಯುವುದೇ ಇಲ್ಲಿರುವ ಪ್ರಮುಖವಾದ ಆಧ್ಯಾತ್ಮ ಪ್ರಶ್ನೆಯಾಗಿದೆ. ಇದನ್ನೇ ಈ ವಚನದಲ್ಲಿ ಬಸವಣ್ಣನವರು ಪ್ರಾಣಲಿಂಗ, ಲಿಂಗಪ್ರಾಣಚ ಭೇದವನ್ನು ತಿಳಿದು ಭ್ರಾಂತಿ ಸೂತಕ ಕಳೆದು 'ಲಿಂಗೈಕ್ಯ'ವಾಗುವ ಸ್ಥಿತಿಯನ್ನು ಷಡುಸ್ಥಲ ಸಿದ್ಧಾಂತವು ತಿಳಿಸುತ್ತದೆ ಎಂಬ ಅಂಶವನ್ನು ಮನೋಜ್ಞವಾಗಿ ನಿರೂಪಿಸಿದ್ದಾರೆ. ಆಧ್ಯಾತ್ಮ ವಿದ್ಯೆಯ ಮೂಲ ಭೂತವಾದ ಪ್ರಶ್ನೆ ಇದಾಗಿದೆ. ಈ ಪ್ರಶ್ನೆಗೆ ಉತ್ತ ಸ್ಪಷ್ಟವಾಗಿ ತಿಳಿಸಿದರೆ, ಯಾವುದೇ ಸಾಧಕನು ಅಖಂಡ ಚೈತನ್ಯ ಸ್ವರೂಪಿಯಾಗುವುದರಲ್ಲಿ ಸಂಶಯವಿಲ್ಲ. ಆದರೆ ಆ ಸಾಧನ ಪಥವ ತಿಳುವಳಿಕೆ ಸಾಧನೆಗಳು ಬೇಕಾಗುತ್ತದೆ. ಈ 'ತಿಳುವಳಿಕೆ'ಗಳು ಷಡುಸ್ಥಲ, ಸಿದ್ಧಾಂತದಲ್ಲಿ ನಿರೂಪಿತವಾಗಿದೆ. ಯಾವುದೇ ಸಾಧಕನು ತನ್ನ 'ಆರು' ಸ್ಥಲಗಳ ನೆಲೆಯ ಸಾಧನೆಯಿಂದ ಸಾಕಾರ, ನಿರಾಕಾರ, ಅಖಂಡ ಚೈತನ್ಯಾತ್ಮಕ ಶಕ್ತಿಯಾಗುವುದನ್ನು ಈ ಷಟ್‌ಸ್ಥಲ ಸಿದ್ದಾಂತ ಬೋಧಿಸುತ್ತದೆ. ಮುಖ್ಯವಾಗಿ ಸಾಧಕನು ತನ್ನ ಷಟ್‌ಚಕ್ರಗಳಲ್ಲಿರುವ ಆರು ಶಕ್ತಿಗಳ ಅವಿಷ್ಕಾರ ಮಾಡಿಕೊಂಡು, ಅಂತ್ಯದಲ್ಲಿ ಆ ಅಖಂಡ ಚೈತನ್ಯ ಸ್ವರೂಪಿಯಾಗುವ ವಿವರವಾದ ಕ್ರಮಗಳನ್ನು ಸಾಧನ ಪಥವಾದ ಇಷ್ಟ ಲಿಂಗೋಪಾದನೆಗಳನ್ನು ಷಟ್‌ಸ್ಥಲ ಸಿದ್ದಾಂತ ಬೋಧಿಸುತ್ತದೆ. ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಅನುಭಾವ ಶಕ್ತಿ, ಆನಂದ ಶಕ್ತಿ, ಆದಿ ಶಕ್ತಿ (ಚಿಚ್ಛಕ್ತಿ), ಪರಾಶಕ್ತಿ (ವಿಮರ್ಶಾತ್ಮಕ ಶಕ್ತಿ) ಮುಂತಾದವುಗಳ ಅವಿಷ್ಕಾರಗಳೇ, ಆ ಅಖಂಡ ಚೈತನ್ಯವಾಗುವಿಕೆಯ ಗುಟ್ಟಾಗಿದೆ. ಈ ಷಟ್‌ಸ್ಥಲ ಸಿದ್ಧಾಂತವನು 101 ಸ್ಥಲಗಳ ನೆಲೆಯಲ್ಲಿ 'ಶ್ರೀ ಸಿದ್ಧಾಂತ ಶಿಖಾಮಣಿ' ಗ್ರಂಥವು ಬೇಧಿಸುತ್ತದೆ. ಆದರೆ, ಈ ಷಟ್‌ಸ್ಥಲ ಸಿದ್ಧಾಂತದ ಆಚರಣೆ ಬಸವಾದಿ ಶರಣರ ವಚನ ವಾಙ್ಮಯದಲ್ಲಿ ಎಲ್ಲಾ ವಚನಗಳಲ್ಲಿ ಹರಿದು ಹಂಚಿಹೋಗಿದೆ. ಆ ಎಲ್ಲಾ ವಚನಗಳಲ್ಲಿನ ಷಟ್‌ಸ್ಥಲ ಸಿದ್ಧಾಂತವನ್ನು ಕ್ರೋಢೀಕರಿಸುವುದು ಕಷ್ಟ ಸಾಧ್ಯವಾದ ಕೆಲಸವಾಗುತ್ತದೆ. ಆದರೆ ಈ "ಷಡುಸ್ಥಲ ಸಿದ್ಧಾಂತ"ವನ್ನು "ಪಂಚಾಚಾರ ಸ್ಥಲ"ಗಳಾದ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಸ್ವರೂಪದಲ್ಲಿ ನಿರೂಪಿಸುವ ಕ್ರಮದ ಆವಿಷ್ಕಾರವಾದರೆ ಮಾತ್ರ ವಚನಗಳಲ್ಲಿರುವ ಷಟ್‌ಸ್ಥಲ ಸಿದ್ಧಾಂತವನ್ನು ತಿಳಿಯಲು ಸಾಧ್ಯವಾಗುತ್ತದೆ. ಇದೇ ರೀತಿಯಲ್ಲಿ 'ಷಡುಸ್ಥಲ ಸಿದ್ಧಾಂತ'ವನ್ನು 'ಇಷ್ಟಲಿಂಗ' ಪ್ರಾಣಲಿಂಗ, 'ಭಾವಲಿಂಗ'ಗಳ ಸ್ವರೂಪದಲ್ಲಿ ಪ್ರತಿಪಾದಿಸುವ ಅವಶ್ಯಕತೆಯೂ ಸಹ ಇದೆ. ಇದಕ್ಕೆ ಆಧಾರವಾಗಿ ಬಸವಣ್ಣನವರ ಒಂದು

ವಚನವನ್ನು ಆಧಾರವಾಗಿ ಗ್ರಹಿಸಬಹುದಾಗಿದೆ. 101 ಸ್ಥಲ ಪ್ರತಿಪಾದಿತ ಷಟ್‌ಸ್ಥಲ ಸಿದ್ಧಾಂತವನ್ನು; ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳ ನೆಲೆಯಲ್ಲಿ ಗ್ರಹಿಸಬೇಕಾಗುತ್ತದೆ.

ವಚನ 2: (ಸಪ್ತ ಸೂತ್ರ ವಚನ) ಇಷ್ಟಲಿಂಗ, ಪ್ರಾಣ ಲಿಂಗ, ಭಾವಲಿಂಗಗಳ ಸಾಧನೆ:

| | |
|---|---|
| 1. ಲಿಂಗ ಸ್ವರೂಪ | ಅಂತರಂಗದೊಳಗಿರ್ದ ನಿರವಯಲಿಂಗವನು ಸಾವಯಲಿಂಗವ ಮಾಡಿ, |
| 2. ದೀಕ್ಷಾ ಕಾರ್ಯ, ಇಷ್ಟ ಲಿಂಗ ಸ್ವರೂಪ | ಶ್ರೀ ಗುರುಸ್ವಾಮಿ ಕರುಸ್ಥಲಕ್ಕೆ ತಂದುಕೊಟ್ಟನಾಗಿ, |
| 3. ಇಷ್ಟ ಲಿಂಗದ ಸಾಧನೆ, | ಆ ಇಷ್ಟಲಿಂಗವೇ ಅಂತರಂಗವನಾವರಿಸಿ, ಅಂತರಂಗದ ಕರಣಂಗಳೇ ಕಿರಣಂಗಳಾಗಿ |
| 4. ಪ್ರಾಣಲಿಂಗ ಸಾಧನೆ | ಬೆಳಗುವ ಚಿದಂಶವೆ ಪ್ರಾಣಲಿಂಗವು |
| 5. ಭಾವಲಿಂಗ ಸ್ವರೂಪ | ಆ ಮೂಲ ಚೈತನ್ಯವೇ ಭಾವಲಿಂಗವು |
| 6. ದೃಷ್ಟಿಯೋಗ: ಇಷ್ಟಲಿಂಗದ ಉಪಾಸನೆ | ಇದನರಿದು ನೋಡುವ ನೋಟ ಭಾವ ಪೂರ್ಣವಾಗಿ ತಾನು ತಾನಾದಲ್ಲದೆ, ಇದಿರಿಟ್ಟು ತೋರುವುದಿಲ್ಲವಾಗಿ |
| 7. ಲಿಂಗೈಕ್ಯ ಸ್ಥಿತಿ ಸಿದ್ಧ ಪುರುಷ | ಅಖಂಡ ಪರಿಪೂರ್ಣವಷ್ಟ "ನಿಜ"ವು ತಾನೆ, ಕೂಡಲ ಸಂಗಮದೇವಾ. |
| | ಬಸವಣ್ಣನವರು; ವಚನ: 971 ಪುಟ 260, ಸಮಗ್ರ ವಚನ ಸಂಪುಟ 1, ಕರ್ನಾಟಕ ಸರ್ಕಾರ 1993, ಲಿಂಗತತ್ತ್ವ ಸ್ವರೂಪ. |

ಈ ಬಸವಣ್ಣನವರ ವಚನವನ್ನು ಏಳುದೆಲೆಗಳಲ್ಲಿ ಗ್ರಹಿಸಬಹುದು. ಈ ಸಾಧಕನಿಗೆ ಅವನ ಗುರುವಿನಿಂದ ದೊರೆಯುವ ದೀಕ್ಷೆ, ತನ್ಮೂಲಕ ಸಾಧಕನಿಗೆ ದೊರೆಯುವ ಇಷ್ಟಲಿಂಗ, ಮತ್ತು ಅದರ ಸ್ವರೂಪ (2) ಇಷ್ಟಲಿಂಗದ ಆರಾಧನೆ ಮತ್ತು ಅದರ 'ಫಲ ಸ್ವರೂಪ', (3) ಇಷ್ಟ ಲಿಂಗದ ಸಾಧನೆಯಿಂದ ದೊರೆಯುವ ಪ್ರಾಣಲಿಂಗ ನೆಲೆ ಮತ್ತು ಅದರ ಸ್ವರೂಪ (4) ಈ 'ಪ್ರಾಣ ಲಿಂಗ'ದ ಸ್ವರೂಪದಿಂದ 'ಭಾವಲಿಂಗ'ವಾಗುವ ಪ್ರಕ್ರಿಯೆಗಳ ಸ್ವರೂಪ (5) ಇಷ್ಟಲಿಂಗದ ಪೂಜಾಕ್ರಮ, ದೃಷ್ಟಿಯೋಗ ಸಾಧನೆ, (6) ಲಿಂಗೈಕ್ಯ ಸ್ಥಿತಿ ಹಾಗೂ ಸಿದ್ಧ ಪುರುಷ (7) ವಚನ (1)ರಲ್ಲಿ ಬಸವಣ್ಣನವರು ಷಡುಸ್ಥಲ ಸಿದ್ಧಾಂತದ ಅವಶ್ಯಕತೆಯನ್ನು ಲಿಂಗೈಕ್ಯ ಸ್ಥಿತಿ ಪಡೆಯಲು ಪ್ರತಿಪಾದಿಸಿದ್ದಾರೆ. ವಚನ (2)ರಲ್ಲಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳ ಅವಶ್ಯಕತೆಯನ್ನು ಲಿಂಗೈಕ್ಯ ಸ್ಥಿತಿ, ಪಡೆಯಲು ಪ್ರತಿಪಾದಿಸಿದ್ದಾರೆ. ಹೀಗಾಗಿ ಷಡುಸ್ಥಲ ಸಿದ್ಧಾಂತವನ್ನು; ಪಂಚಾಚಾರ ಸ್ಥಲಗಳ ಹಿನ್ನೆಲೆಯಲ್ಲಿ ನಿರೂಪಿಸುವುದು, ಹಾಗೂ ಷಡುಸ್ಥಲ ಸಿದ್ಧಾಂತವನ್ನು ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳ ಮತ್ತು ನೆಲೆಯಲ್ಲಿ ನಿರೂಪಿಸುವುದು ಅನಿವಾರ್ಯವಾಗಿದೆ. ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳು ಸಾಧನ ಮಾರ್ಗವಾದರೆ, ಪಂಚಾಚಾರಸ್ಥಲಗಳು; ನಿರೂಪಣಾ ಮಾಧ್ಯಮಗಳಾಗಿವೆ. ಈ ಅನುಭಾವ ನಿರೂಪಣಾ ಮಾರ್ಗ ಪಂಥ (ಧರ್ಮ) ನಿರಪೇಕ್ಷವಾಗಿದೆ. ಆದರೆ; ಇವೆರಡೂ ಮಾರ್ಗಗಳು ಷಟ್ ಸ್ಥಲ ಸಿದ್ಧಾಂತದ (101 ಸ್ಥಲ ಪ್ರತಿಪಾದನೆಯ) ಹಿನ್ನೆಲೆಯಲ್ಲೇ ಇವೆ. ಇದರ ಪ್ರಮಾಣೀಕರಣ ಈ ಕೆಳಗಿನ ವಿವರಗಳನ್ನು ಹೊಂದಿದೆ. ಚಿತ್ರ–7 ರಲ್ಲಿ ಶಿವ ಶಕ್ತಿ ಪ್ರತಿಪಾದಿತವಾದ ಷಟ್‌ಕೋನವಿದೆ. ಈ ಚಿತ್ರದಲ್ಲಿ 101 ಸ್ಥಲಗಳ ಪ್ರತಿಪಾದನೆಯ 5 ಹಂತಗಳ ಪ್ರಕ್ರಿಯೆಗಳಿವೆ. ಮೊದಲಹಂತ; ಷಟ್‌ಕೋನವನ್ನು 'ಗುರು, ಲಿಂಗ, ಜಂಗಮ' ಪ್ರಕ್ರಿಯೆಗಳಿಗೆ, 'ಲಿಂಗತತ್ತ್ವ' ಹಾಗೂ 'ಶಿವ–ಶಕ್ತಿ' ತತ್ತ್ವಗಳಿಗೆ ಅನ್ವಯಮಾಡುವುದು. ಷಟ್‌ಕೋನಗಳ ಮೇಲ್ಮುಖ ತ್ರಿಕೋನವು 'ಶಿವತತ್ತ್ವ'ವನ್ನು ಪ್ರತಿಪಾದಿಸಿದರೆ, ಕೆಳಮುಖ ತ್ರಿಕೋನವು 'ಶಕ್ತಿ ತತ್ತ್ವ'ವನ್ನು ಪ್ರತಿಪಾದಿಸುತ್ತದೆ. ಇದು

ತಂತ್ರಶಾಸ್ತ್ರದ ನಿರೂಪಣೆಯಾಗಿದೆ. ಈ ತ್ರಿಕೋನಗಳು ಸಮಭುಜ, ಹಾಗೂ ಸಮಕೋನಗಳದ್ದಾದರೆ, ಷಟ್‌ಕೋನವು "ಸಮ-ಸ್ಥಿತಿ"ಯ ಸೃಷ್ಟಿಯನ್ನು ಪ್ರತಿಪಾದಿಸುತ್ತದೆ. ಇದು ತಂತ್ರಶಾಸ್ತ್ರದ ನಿರೂಪಣೆಯಾಗಿದೆ. ಈ ತ್ರಿಕೋನಗಳು ಸಮಭುಜ, ಹಾಗೂ ಸಮಕೋನಗಳದ್ದಾದರೆ, ಷಟ್‌ಕೋನವು "ಸಮ-ಸ್ಥಿತಿ"ಯ ಸೃಷ್ಟಿಯನ್ನು ಪ್ರತಿಪಾದಿಸುತ್ತದೆ. ಅದಲ್ಲದೆ ಪಾದ ಸಮಕೋನಗಳು ಮಾತ್ರ ಇದ್ದರೆ ಅದು ಚಲನಶೀಲ **(Dynamic)** ಸೃಷ್ಟಿಕಾರ್ಯವನ್ನು ಪ್ರತಿಪಾದಿಸುತ್ತದೆ. ಇಲ್ಲಿ ಸಮ-ಸ್ಥಿತಿಯ **(Equalization),** ಷಟ್‌ಕೋನ ಪ್ರಕ್ರಿಯೆಯನ್ನು ತೆಗೆದುಕೊಳ್ಳಲಾಗಿದೆ. ಎರಡನೆಯ ಹಂತದಲದಲ್ಲಿ "ಶಿವ-ಶಕ್ತಿ" ತ್ರಿಕೋನವನ್ನು ಏಕೀಕರಿಸಲಾಗಿದ್ದು, ಪ್ರತಿಯೊಂದು ತ್ರಿಭುಜವು "ಗುರು-ಗುರು" "ಲಿಂಗ-ಲಿಂಗ"; "ಜಂಗಮ-ಜಂಗಮ"ವನ್ನು ನಿರೂಪಿಸುತ್ತದೆ. ಮೂರನೆಯ ಹಂತದಲಿ ಏಕ ಮುಖವಾಗಿ ಏಕೀಕರಿಸಿರುವ 'ಶಿವ-ಶಕ್ತಿ' ತ್ರಿಕೋನಗಳಲ್ಲಿ ಶಕ್ತಿ ತ್ರಿಕೋನ ಪ್ರತಿಪಾದನೆಯನ್ನು ವೃತ್ತಾಕಾರವಾಗಿ ನಿರೂಪಿಸಲಾಗಿದೆ. ಈ ಮೂರನೆಯ ಹಂತದ 'ಶಿವ-ಶಕ್ತಿ'ಗಳ ಪ್ರತಿಪಾದನೆಗಳನ್ನೇ ಹಂತ ನಾಲ್ಕರಲ್ಲಿ ಗುರು-ಗುರು, ಲಿಂಗ-ಲಿಂಗ, ಜಂಗಮ-ಜಂಗಮ; ಗುರು-ಜಂಗಮ, ಜಂಗಮಲಿಂಗ, ಲಿಂಗ ಗುರು; ಗುರುಲಿಂಗ, ಲಿಂಗಜಗಮ, ಜಂಗಮಲಿಂಗಗಲಾಗಿ ಒಂಭತ್ತು ಗುಂಪುಗಳಾಗಿ, ತಿಳಿಯಲಾಗಿದೆ. ಹಂತದರಲ್ಲಿ ಗುರು, ಲಿಂಗ, ಜಂಗಮನಲ್ಲಿ ಇದೇ ಒಂಭತ್ತು ಗುಂಪುಗಳನ್ನು ನಿರೂಪಿಸಲಾಗಿದೆ.

ಪುಟ 53

ಈ ನೆಲೆಯಲ್ಲಿ ಹಂತ ನಾಲ್ಕರಲ್ಲಿ ಗುರುಗುರು, ಲಿಂಗಲಿಂಗ, ಜಂಗಮ ಜಂಗಮ, ತ್ರಿಕೋನಗಳ ಮೂಲೆಯಲ್ಲಿ 45, 46, 47; 48, 49, 50; 51, 52, 53 ಮುಂತಾದಾಗಿ 101 ರವರೆಗೆ ಅಂಕಿಗಳನ್ನು ದಾಟುತ್ತ ಹೋದಾಗ; ಚಿತ್ರ:5 ರಂತೆ101 ಸ್ಥಲ ಕ್ರಮದ ಲಿಂಗಸ್ಥಲಗಲೂ (57 ಲಿಂಗಸ್ಥಲಗಳು) ಹಾಗೂ ಲಿಂಗಸ್ಥಲ (44 ಲಿಂಗಸ್ಥಲ, ಕ್ರಮಗಳು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿರುವಂತೆ ನಿರೂಪಿತವಾಗುತ್ತದೆ. ಈ ರೂಪುರೇಷೆಗಳ, ಅಂದರೆ ಷಟ್‌ಕೋನ ಪ್ರಕ್ರಿಯೆಗಳ ಹಿನ್ನೆಲೆಯಲ್ಲಿಯೇ ಶ್ರೀ ಶಿವಯೋಗಿ ಶಿವಾಚಾರ್ಯರು ಷಟ್‌ಸ್ಥಲ ಸಿದ್ಧಾಂತವನ್ನು ನಿರೂಪಿಸಿದ್ದಾರೆ ಎಂದು ತಿಳಿಯಲು ಸಾಕಷ್ಟು ಪುರಾವೆಗಳಿವೆ **(evidence)** ಈ ಹಿನ್ನೆಲೆಯಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿ 'ಗ್ರಂಥವನ್ನು' ರಚಿಸಿ (ಷಟ್‌ಸ್ಥಲ ಸಿದ್ಧಾಂತ ಸ್ವರೂಪದಲ್ಲಿ) ಅದನ್ನು ಕ್ರಮ ಸಮುಚ್ಚಯದಲ್ಲಿ 1 ರಿಂದ 101 ಸ್ಥಲ ಕ್ರಮದಲ್ಲಿ ಶ್ರೀ ಶಿವಯೋಗಿ ಶಿವಾಚಾರ್ಯರು "ವಿರಚಿಸಿದ್ದಾರೆ" ಅಥವಾ "ಸೃಜಿಸಿ"ದ್ದಾರೆ ಎಂದು ತಿಳಿಯಬಹುದಾಗಿದೆ. ಈಗ ಈ "ನವಮಾರ್ಗಗಳ" ಸ್ವರೂಪದಲ್ಲಿರುವ ವಿಚಾರ ವಿಮರ್ಶೆಯೇ ಈ ಷಟ್‌ಸ್ಥಲ ಸಿದ್ಧಾಂತ; ಪಂಚಾಚಾರ ಸ್ಥಲಗಳು; ಹಾಗೂ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳ ನಿರೂಪಣೆಗಳಿಗೆ ಆಧಾರವಾದ 'ಚಿಂತನೆಗಳಾಗುತ್ತದೆ. ಈ ಕ್ರಮವನ್ನು ನವವರ್ಗದ ಸಮಗ್ರ ಸಮುಚ್ಚಯ ಕ್ರಮವೆಂದು ಕರೆದರೆ, ಕ್ರಮ ಸಮುಚ್ಚಯ ಕ್ರಮದ (ಅಂದರೆ 1 ರಿಂದ 101 ಸ್ಥಲದ) ವಿಚಾರಗಳನ್ನು ಚಿತ್ರ-8 ಮತ್ತು ಚಿತ್ರ-9 ರಲ್ಲಿ ಹಾಗೂ ಕನ್ನಡದಲ್ಲಿ ಸ್ಥಲಗಳ ಹೆಸರುಗಳನ್ನು ನಿರೂಪಣೆ ಮಾಡಲಾಗಿದೆ. ಈ ಕ್ರಮ ಸಮುಚ್ಚಯದ ಶ್ರೀ ಸಿದ್ಧಾಂತ ಶಿಖಾಮಣಿ ಅಧ್ಯಯನಗಳು ನವವರ್ಗ ಸಮಗ್ರ ಸಮ ಸಮುಚ್ಚಯಕ್ರಮದ ಅಧ್ಯಯನಗಳಿಗೆ ಅನುಕೂಲವಾಗುತ್ತದೆ. ಈ 'ನವವರ್ಗ'ಗಳು ಅಂದರೆ 1.ಗುರು-ರುಗು, 2. ಲಿಂಗಲಿಂಗ, 3. ಜಂಗಮಲಿಂಗ, 4. ಜಂಗಮ ಜಂಗಮ 5. ಗುರು-ಜಂಗಮ 6.ಜಂಗಮಗುರು ಮತ್ತು ಗ್ರಂಥದಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿ ಪ್ರತಿಪಾದಿತವಾಗಿರುವ "ವಿಚಾರಗಳನ್ನೆ ಪ್ರತಿಪಾದಿಸುತ್ತದೆ. ಈ ಎಲ್ಲಾ ವರ್ಗಗಳ ವಿವರಣೆಗಳಿಗೆ ಹೋಗುವ ಮೊದಲು ಆಯಾ ವರ್ಗಗಳಲ್ಲಿನ ವಿಚಾರ ಸಾರಾಂಶವನ್ನು ಇಲ್ಲಿ ಪ್ರತಿಪಾದಿಸಲಾಗಿದೆ. ವರ್ಗ-I " "ಗುರುಗುರು" ಇದು "ಇಷ್ಟಲಿಂಗದ ಸಾಧನೆ"ಯನ್ನು ಪ್ರತಿಪಾದಿಸುತ್ತದೆ. ಇಲ್ಲಿ

ನೂರೊಂದು ಸ್ಥಲಗಳ ಲಿಂಗಸ್ಥಲಗಳಿಂದ 1 ರಿಂದ 15, 16 ರಿಂದ 24 ಸ್ಥಲಗಳು ಲಿಂಗಸ್ಥಲಗಳಾಗಿ ಪ್ರತಿಪಾದಿತವಾಗಿ, 45, 46, 47ನೆಯ ಲಿಂಗಸ್ಥಲಗಳು ಹಾಗೂ 54, 55, 56ನೆಯ ಲಿಂಗಸ್ಥಲಗಳೂ ಸಹ ಪ್ರತಿಪಾದಿತವಾಗಿದೆ. ಈ ಗುಂಪಿನ ಸ್ಥಲಗಳಲ್ಲಿನ ವಿಚಾರಗಳು ಸಾಧಕನ ದೀಕ್ಷೆ; ಇಷ್ಟಲಿಂಗೋಪಾಸನಾ ವಿಚಾರಗಳು, ಹಾಗೂ ಸಾಧಕನ ಆಧ್ಯಾತ್ಮಿಕ ಅರ್ಹತೆಗಳು ಮತ್ತು ಅವನ ಇಷ್ಟ ಲಿಂಗೋಪಾಸನೆಯಲ್ಲಿ ತೊಡಗಿಕೊಂಡಾಗ ಇರಬೇಕಾದ ಮನೋಧರ್ಮಗಳನ್ನು ಇರೂಪಿಸುತ್ತದೆ. ಈ ಗುಂಪನ್ನು 'ಇಷ್ಟಲಿಂಗ'ವೆಂದು, 'ಕಾಯಗುರು'ವೆಂದೂ, "ಆಯತ ಸಂಸ್ಕಾರವೆಂತಲೂ ತಿಳಿಯಬಹುದಾಗಿದೆ. ಈ ವರ್ಗದ ವಿಚಾರಗಳ ಆಚರಣೆಯಿಂದ ಸಾಧಕನು 'ಸೋಹೋ ಹಂ' ಭಾವದಿಂದ 'ಶಿವೋಹಂ' ಭಾವದ ಕಡೆಗೆ ಅವನ ಮನೋಧರ್ಮಗಳನ್ನು ಬೆಳೆಸಿಕೊಳ್ಳುತ್ತಾನೆ. ಈ ಇಷ್ಟಲಿಂಗದ ಸಾಧನೆಯೇ ಸಾಧಕನ ಅಂತರಂಗದ ಕರಣಂಗಳನ್ನು ಚಿತ್ ಅಂಶದ (ಬೆದಂಶದ) ಕಿರಣಗಳಾಗಿ ಮಾಡಿ ಅವನಲ್ಲಿನ 'ಪ್ರಾಣ ಲಿಂಗ'ದ ಸ್ವರೂಪವನ್ನು ಪ್ರಕಟಗೊಳಿಸುತ್ತದೆ. ಪ್ರಾಣಲಿಂಗವೆಂದರೆ ಸಾಧಕನ ಪ್ರಾಣದಲ್ಲಿರುವ ಅಖಂಡ ಚೈತನ್ಯಾತ್ಮಕ ಶಕ್ತಿ ಸ್ವರೂಪದ ಶಕ್ತಿ ವಿಶಿಷ್ಠ ಅರಿವಿನ ಸ್ವರೂಪವಾಗಿದೆ. ಇದನ್ನೇ 'ಬೆಂದಂಶವೆಂದು ಮೇಲೆ ಪ್ರತಿಪಾದಿಸಲಾಗಿದೆ. ಸಾಧಕನ ಮನಸ್ಸು (ಮದತತ್ತ್ವವು) ಈ ಚಿಂದಂಶ ಸ್ವರೂಪವಾಗುವುದೇ ಪ್ರಾಣಲಿಂಗ ಸಾಧನೆಯಾಗಿದೆ. ಈ ಸಾಧನೆಯ ವಿವರಗಳನ್ನು ವರ್ಗ–II : 'ಲಿಂಗಲಿಂಗ– ಪ್ರತಿಪಾದಿಸುತ್ತದೆ. ಈ ಪ್ರಾಣಲಿಂಗದ ಸಾಧನೆಯ ಮೂಲದಲ್ಲಿ 1) ಅರ್ಪಣ ವಿಧಾನಗಳು, 2) ಕುಂಡಲಿನಿಯೋಗ ಷಟ್‌ಚಕ್ರ ಭೇದ 'ಪ್ರಕ್ರಿಯೆಗಳು, ಹಾಗೂ 3) ಮನಮಗ್ನ ಯೋಗ 'ಪ್ರಕ್ರಿಯೆಗಳು, 'ವೀರಶೈವ ಧರ್ಮ' ಪರವಾಗಿ ಇವೆ. ಅಂದರೆ 'ಇಷ್ಟಲಿಂಗೋಪಾಸನಾ' ಪರವಾಗಿ ಇದೆ. ಹಾಗೂ ಆ ಉಪಾಸನಾಕ್ರಮದ ಭಾಗಗಳಾಗಿದೆ. ಈ ನೆಲೆಯಲ್ಲಿ ಕೇವಲ ಯಾವುದಾದರೂ ಒಂದು ಇಲ್ಲವೇ ಎರಡು ಅಥವಾ ಮೂರು ಸೇರಿರಬಹುದಾದ ಸಂದರ್ಭಗಳಿವೆ.

ಇವೆಲ್ಲಾ ವಿಚಾರಗಳನ್ನು 25 ರಿಂದ 31 ಲಿಂಗಸ್ಥಲಗಳಲ್ಲೂ, 32 ರಿಂದ 36 ಲಿಂಗಸ್ಥಲಗಳಾಗಿಯೂ ಮತ್ತು 66, 67, 68 ಲಿಂಗಸ್ಥಲಗಳಾಗಿಯೂ ಮತ್ತು 75, 76, 77 ಲಿಂಗಸ್ಥಲಗಳಾಗಿಯೂ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಪ್ರತಿಪಾದಿತವಾಗಿದೆ. ಇನ್ನೂ ಈ ಪ್ರಾಣ ಲಿಂಗದ ಸಾಧನೆಯ ಹಿನ್ನೆಲೆಯಲ್ಲಿನ ಚಿದಂಶದ ಹಿನ್ನಲೆಯಲ್ಲಿನ "ಮೂಲ" ಚೈತನ್ಯವೇ ಭಾವಲಿಂಗವಾಗಿದೆ. ಈ ಭಾನಲಿಂಗದ ಸ್ವರೂಪವನ್ನು ವರ್ಗ–III, ಜಂಗಮ ಜಂಗಮ ವರ್ಗ ಪ್ರದಿಪಾದಿಸುತ್ತದೆ. ಈ ಮೂಲ ಚೈತನ್ಯ ಸ್ವರೂಪವು ಕೇವಲ ಚೈತನ್ಯಾತ್ಮಕವಾಗಿದ್ದು, ಅಪ್ರಕಟಿತವಾಗಿ 'ವಿಮರ್ಶಾ ಶಕ್ತಿ' ಅಥವಾ 'ಪರಾಶಕ್ತಿ' ಸ್ವರೂಪದಲ್ಲಿರುತ್ತದೆ. ಈ ವಿಚಾರಗಳನ್ನು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವು 37 ರಿಂದ 45 ಸ್ಥಲಗಳಾದ ಲಿಂಗಸ್ಥಲಗಳಲ್ಲೂ ಹಾಗೂ 41 ರಿಂದ 44 ಲಿಂಗ ಸ್ಥಲಗಳಲ್ಲೂ ಮತ್ತು 87, 88, 89 ಲಿಂಗಸ್ಥಲಗಳಾಗಿಯೂ ಹಾಗೂ 96, 97, 98, 99, 100, 101 ಲಿಂಗಸ್ಥಲಗಳಾಗಿಯೂ ಪ್ರತಿಪಾದನೆಗೊಂಡಿದೆ. ಈ 101 ಸ್ಥಲದ ವಿವರಣೆಗಳೇ ಅಖಂಡ ಪರಿಪೂರ್ಣವನ್ನ 'ನಿಜ'ದ ಸ್ಥಿತಿಯೇ ಆಗಿದ್ದು, ಸಹಜ ಅಥವಾ ಕೂಡಲಸಂಗಮ ದೇವನ ಸ್ಥಿತಿಯಾಗಿದೆ.ಈ ವರ್ಗ– II ಲಿಂಗಲಿಂಗವನ್ನು ಪ್ರಾಣಲಿಂಗವೆಂದು ತಿಳಿದರೆ, ಅದನ್ನೇ 'ಸ್ವಾಯುತ' ಸಂಸ್ಕಾರವೆಂದೂ ಹೇಳಲಾಗಿದೆ. ವರ್ಗದ– III, ಜಂಗಮ ಜಂಗಮವನ್ನು ಯಾವಲಿಗವೆಂದು ತಿಳಿದರೆ ಅದನ್ನೆ 'ಜ್ಞಾನ ಜಂಗಮು' ಅಥವಾ 'ಸ ಹಿತ' ವೆಂದೂ ಸಹ ತಿಳಿಯಲಾಗಿದೆ. ಹೀಗೆ ಸಾಧಕನು ತನ್ನ ಇಷ್ಟಲಿಂಗ, ಪ್ರಾಣಲಿಂಗ, ಪ್ರಾಣ ಲಿಂಗ, ಭಾವಲಿಂಗಗಳ ಸಾಧನೆಯ ಮೂಲ ಮೋಕ್ಷ ಸ್ವರೂಪದ 'ನಿಜ'ಸ್ಥಿತಿಯನ್ನು ತಲುಪಲು (ಇಷ್ಟಲಿಂಗೋಪಾಸನೆಯ ಮೂಲಕ) ಸಾಧಕನು ತನ್ನ ಸಾಧನೆಯ ಭಾಗವಾಗಿ ತನ್ನ 'ನಿಜ' ಸ್ಥಿತಿಯ ಸಾಧನೆಗಳನ್ನು ಮಾಡಲು ಬೇಕಾದ ಎಲ್ಲಾ ವಿವರಗಳನ್ನು ಪಡೆಯಬೇಕಾಗುತ್ತದೆ. ಈ ವಿಚಾರಗಳನ್ನೆ ಪಾದೋದಕ, ಪ್ರಸಾದಗಳಾಗಿಯೇ ಗ್ರಹಿಸಲಾಗಿದೆ. ಈ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳು; ಸಾಧಕನ

ಷಟ್‌ಸ್ಥಲ ಸಿದ್ಧಾಂತ ಸ್ವರೂಪದ ಗುರು, ಲಿಂಗ, ಜಂಗಮಗಳಾದರೆ (ವರ್ಗ – I, ವರ್ಗ – II, ವರ್ಗ – III) ವರ್ಗ– IV, ಪಾದೋದಕವಾಗಿರುತ್ತದೆ. / ಪಾದೋದಕ ಗುರುಜಂಗಮವೆಂದರೆ ಸಾಧಕನಿಗೆ ಶಿವಸ್ವರೂಪಿಯಾದ 'ಗುರು ಸ್ವರೂಪಿ ಜಂಗಮ'ನ ಪರಿಚಯವಾಗಿದೆ. ಈ ಗುರು ಸ್ವರೂಪಿ ಜಂಗಮನು ಸಾಧಕನಿಗೆ ದೀಕ್ಷೆಕೊಟ್ಟು, ಶ್ರೀ ಗುರುವೇ ಆಗಿರಬಹುದು. ಇಲ್ಲವೇ ಬೇರೆ ಯಾರೇ ಜ್ಞಾನಿಯಾಗಿರಬಹುದು. ಈ ಜ್ಞಾನಿಯ 'ಪರಿಚಯ' ಸಾಧಕನಿಗೆ ಅತ್ಯಂತ ನಿಕಟವಾದದ್ದಾಗಿದ್ದು; ಅದರಿಂದ ಸಾಧಕನಿಗೆ ದೀಕ್ಷೆ ದೊರೆಯಬಹುದು. ಇಲ್ಲಾ ಖಂಡಿತ ಅವನಿಗೆ ಶಿಕ್ಷೆ, ಹಾಗೂ ಜ್ಞಾನಗಳು ದೊರಕುತ್ತದೆ. ಇದೂ ಅಲ್ಲದೆ ಅಂತಹ ಜ್ಞಾನಿಯ ಸ್ವರೂಪವೇ ಕ್ರಿಯೆ, ಭಾವ, ಜ್ಞಾನಗಳಾದ "ಶಿವನ ಪ್ರಕಾಶ"ಗಳಾಗಿರುವುದರಿಂದ; ಸಾಧಕನಿಗೆ ಸಾಕ್ಷಾತ್ ಶಿವಸ್ವರೂಪವೇ ಪ್ರಕಾಶ ಸ್ವರೂಪದಲ್ಲಿ ದೊರೆಯುತ್ತದೆ. ಈ ಸ್ಥಿತಿಯು ಸಾಧಕನಿಗೆ ಅತ್ಯಂತ ಪ್ರಮುಖವಾದ ಮಾದರಿಯಾಗಿದ್ದು, ಅಂತಹ ಶಿವ ಸ್ವರೂಪ ಜ್ಞಾನಿಯಂತೆಯೇ ಆಗಲು ಪ್ರೇರಣೆ ಸಿಗುತ್ತದೆ. ಈ ವಿಚಾರಗಳನ್ನು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವು 81, 82, 83 ಲಿಂಗಸ್ಥಲಗಳಾಗಿಯೂ ಮತ್ತು 90, 91, 92 ಲಿಂಗಸ್ಥಲಗಳಾಗಿಯೂ ವರ್ಗ–IV, ರಲ್ಲಿ ಪ್ರತಿಪಾದಿಸುತ್ತದೆ. ಈ 'ಸ್ಥಲಗಳು ಕೇವಲ ಲಿಂಗಸ್ಥಲಗಳಾದರೂ ಸಹ; 37 ರಿಂದ 44 ಲಿಂಗಸ್ಥಲಗಳ ಅಭಿಪ್ರಾಯಗಳೂ ಸೇರಿರುತ್ತದೆ. ಈ ರೀತಿಯ ಶಿವಸ್ವರೂಪಿ ಜ್ಞಾನಿಯ ಪರಿಚಯವಾದ ಸಾಧಕನು ಆ ಜ್ಞಾನಿಯಾದ 'ಜಂಗಮಲಿಂಗ' ಸ್ವರೂಪಿಯಲ್ಲಿ ಶಿಷ್ಯ, ಶುಶ್ರೂಷ ಮತ್ತು ಸೇವ್ಯನಾಗಿ ತನ್ನನ್ನು ತಾನು ತೊಡಗಿಸಿಕೊಳ್ಳುತ್ತಾನೆ. ಹೀಗೆ ಮಾಡಿದಾಗ ಆ ಸಾಧಕನಿಗೆ ಪರಿಣಾಮದಲ್ಲಿ ಆ 'ಜಂಗಮಲಿಂಗ'ದಿಂದ ಆದಿ, ಅಂತ್ಯ, ಸೇವ್ಯ ಸ್ವರೂಪ ಪ್ರಸಾದಗಳು ದೊರಕುತ್ತದೆ. ಅಂದರೆ ಸೃಷ್ಟಿಕಾರ್ಯ, ಈ ಸೃಷ್ಟಿಯ ಲಯ ಕಾರ್ಯ ಹಾಗೂ ಶಿವನ ಸ್ವರೂಪ ಜ್ಞಾನದೊರೆತು, ಇವುಗಳಲ್ಲಿ ಸಾಧಕನ ಪಾತ್ರದ ತಿಳುವಳಿಕೆ 'ಪ್ರಸಾದ'ವಾಗಿ ದೊರಕುತ್ತದೆ. ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಈ ವಿಚಾರಗಳನ್ನು 69, 70, 71 ಲಿಂಗ ವರ್ಗದಲ್ಲಿ ದೊರಕುತ್ತದೆ. ಈ ರೀತಿಯಾದ 'ಜಂಗಮಲಿಂಗ' ಸಂಬಂಧದಲ್ಲಿ ಪ್ರಸಾದ ಪಡೆಯುವ ಕ್ರಮವನ್ನು ಬಸವಾದಿ ಶರಣರು ತಮ್ಮ ಅನುಭವ ಮಂಟಪದಲ್ಲಿ ಆಚರಣೆಗೆ ತಂದಿದ್ದರು. 'ಚರ್ಚಾ ಮಾಧ್ಯಮ'ದ ಮೂಲಕ ಶಿವಜ್ಞಾನಿಯ ಪರಿಚಯ ಸ್ವರೂಪದ' ಪಾದೋದಕವನ್ನು ಹಾಗೂ ಆದಿ, ಅಂತ್ಯ ಸ್ವರೂಪ 'ಪ್ರಸಾದ'ಗಳನ್ನು ಅನುಭವ ಮಂಟಪದಲ್ಲಿ ಬಸವಾದಿ ಶರಣರಿಗೆ ದೊರಕಿತ್ತು. ಅಂದರೆ ವೈಯಕ್ತಿಕ ನೆಲೆಯ 'ಪಾದೋದಕ', ಪ್ರಸಾದಗಳು ಬಸವಾದಿ ಶರಣರು ಸಾರ್ವತ್ರಿಕವಾಗಿ ದೊರೆಯುವಂತೆ ತಮ್ಮ ಆಚರಣೆಗಳನ್ನು ಅಳವಡಿಸಿಕೊಂಡಿದ್ದರು. 'ಶ್ರೀ ಸಿದ್ಧಾಂತ ಶಿಖಾಮಣಿ' ಗ್ರಂಥದಲ್ಲಿ 'ಷಟ್‌ಸ್ಥಲ ಸಿದ್ಧಾಂತ'ದ ಭಾಗವಾಗಿ ಈ 'ಪಾದೋದಕ', 'ಪ್ರಸಾದಗಳು' (ಜಂಗಮಲಿಂಗ) ಸಾಧಕನಿಗೆ ವೈಯಕ್ತಿಕ ನೆಲೆಯಲ್ಲಿ ದೊರಕಿದರೆ; ಬಸವಾದಿ ಶರಣರ ಕಾಲದಲ್ಲಿ ಅದೇ ಷಟ್‌ಸ್ಥಲ ಸಿದ್ಧಾಂತದ ಆಚರಣೆಯಲ್ಲಿ ಈ ಪಾದೋದಕ, ಪ್ರಸಾದಗಳು ಸಾಧಕರಿಗೆ ಸಾರ್ವತ್ರಿಕವಾಗಿ ಅನುಭ ಮಂಟಪದ ಸಂದರ್ಭದಲ್ಲಿ ಚರ್ಚಾ ಮಾಧ್ಯಮದಲ್ಲಿ ದೊರಕಿತು. ಈ ವಿಚಾರವನ್ನು ಇಲ್ಲಿ ಗಮನಿಸಲೇಬೇಕು. ಈ ವೀರಶೈವ ಧರ್ಮವು; ಯಾರನ್ನೇ ಆದರೂ ಸಹ, ಅವರ "ಆಸಕ್ತಿ ಮತ್ತು ಅರ್ಹತೆಗಳ" ಆಧಾರದಲ್ಲಿ ದೀಕ್ಷೆಕೊಟ್ಟು ಧರ್ಮದ ಒಳಗೆ ತೆಗೆದುಕೊಳ್ಳುವ ಅವಕಾಶವುಳ್ಳದ್ದರಿಂದ; ವೈಯಕ್ತಿಯ ನೆಲೆಯ ಪಾದೋದಕ, ಪ್ರವಾಹಗ, ಸಂದರ್ಭಕ್ಕಿಂತ ಹೀಗೆ ಅನುಭವ ಮಂಟಪಗಳ ಚರ್ಚಾ ಮಾಧ್ಯಮದ ಸಾರ್ವತ್ರಿಕ ಪಾದೋದಕ, ಪ್ರಸಾದಗಳು ಹೆಚ್ಚು ಹೆಚ್ಚು ಪ್ರಯೋಜನಕಾರಿಯಾಗಿದ್ದು, ಬಸವಾದಿ ಶರಣರು ಅತ್ಯಂತ ಸಮರ್ಥವಾಗಿ ಈ ಅನುಭಾವ ಮಂಟಪದ ಸಂದರ್ಭವನ್ನು ಚೆನ್ನಾಗಿ ಉಪಯೋಗಿಸಿಕೊಂಡರು. ಆದರೆ ಬಸವಾದಿ ಶರಣರ ಕಾಲವಾದ ಮೇಲೆ ಇದುವರೆವಿಗೂ ಹಾಗೂ ಇಂದಿಗೂ ಈ ಅನುಭವ ಮಂಟಪದ ಸಾರ್ವರ್ತಿಕ ವೇದಿಕೆ ಸಮಾಜದಲ್ಲಿನ ವ್ಯಕ್ತಿಗಳಿಗೆ ಎಷ್ಟು ಸಹಾಯ ಮಾರ್ಗದರ್ಶನ ಮಾಡಿದೆ ಎಂದು ತಿಳಿಯುವುದು ಕಷ್ಟವಾಗಿದೆ. ಅದು ಏನಿದ್ದರೂ "ವೇದಿಕನು ಭಾಷಣಗಳ" 'ಪ್ರವಚನ'ಗಳ

ವೇದಿಕೆಗಳಾಗಿಯೇ ಹೊರತು (ಇಂದಿಗೆ ಇದು ಅಕ್ಷರಶಃ ನಿಜವಾಗಿದೆ) ಪರಸ್ಪರ ಚರ್ಚಾ ಮಾಧ್ಯಮವಾಗಿ ಉಳಿದಿಲ್ಲ. ಇಂದಿನ ವೀರಶೈವ ಧರ್ಮದ ಸಂದರ್ಭ ಕೇವಲ "ಹೇಳು-ಕೇಳು" ಸಂಸ್ಕೃತಿಗೆ ಒಳಗಾಗಿ, ಸಮಾಜದಲ್ಲಿ ವೀರಶೈವ ಧರ್ಮ ವಿಚಾರ- ಆಚಾರ ಕ್ಷೋಭೆಗೆ ಒಳಗಾಗಿದೆ. ಸರಿಯಾದ ವಿಚಾರದಲ್ಲಿದೆ ಸರಿಯಾದ ಆಚಾರವಿಲ್ಲದ 'ಧರ್ಮಕ್ಷೋಭೆ'ಯಿಂದ ವೀರಶೈವ ಧರ್ಮೀಯರು ಇಂದಿಗೂ ಬಳಲುತ್ತಿದ್ದಾರೆ. ಹೇಳುವವರಾದ ಸಮಾಜದಲ್ಲಿನ 'ಜಂಗಮಲಿಂಗ'ಗಳಾದ; "ಸ್ವಾಮಿಗಳು," "ಮಠ ಮಾನ್ಯಗಳು" ವಿದ್ವಾಂಸರು; 'ಸಂಘ-ಸಂಸ್ಥೆಗಳು", ಎಲ್ಲ ಧರ್ಮದ ಸ್ವರೂಪ ತಿಳಿಯದೆ, ಮನಬಂದಂತೆ ಧರ್ಮದ ವಿಚಾರಗಳನ್ನು ಹೇಳುತ್ತಾ – ಕೇಳುತ್ತಾ – ಬರೆಯುತ್ತಾ – ಓದುತ್ತಾ ಹ್ರಷ್ವ ಸಂದರ್ಭಕ್ಕೆ ಸಿಲುಕಿಹಾಕಿಕೊಂಡಿದ್ದಾರೆ. ಬಸವಾದಿ ಶರಣರ ವಚನ ವಾಙ್ಮಯವು "ಲಿಂಗತತ್ತ್ವ"ದ ಸಾಧನೆಯನ್ನು ಹಾಗೂ "ಲಿಂಗತತ್ತ್ವದ" ಹಿನ್ನಲೆಯಲ್ಲಿ "ಲಿಂಗತತ್ತ್ವ"ದ ಸಾಧನೆಯನ್ನು ಹಾಗೂ 'ಲಿಂಗತತ್ತ್ವ'ದ ಹಿನ್ನೆಲೆಯಲ್ಲಿ 'ಸಾಮಾಜಿಕ ನ್ಯಾಯ'ಗಳನ್ನು ಖಚಿತವಾಗಿ ಪ್ರತಿಪಾದಿಸಿದೆ ಎಂಬ ತಿಳುವಳಿಕೆ ಸರಿಯಾಗಿ ಉಂಟಾಗಬೇಕಾದರೆ, ಈ ಪಾದೋದಕ, ಪ್ರಸಾದ ಸ್ವರೂಪ 'ಜಂಗಮ ಲಿಂಗ'ಗಳಲ್ಲಿನ 'ಸಿದ್ಧಾಂತ – ಹಾಗೂ ಅನುಭಾವ' ಗಳಲ್ಲಿನ ಜ್ಞಾನದ ಮಟ್ಟ ಹೆಚ್ಚಾಗಬೇಕಾದ ಅನಿವಾರ್ಯತೆಗಳಿವೆ. ಸಮಾಜದಲ್ಲಿನ ಜನರು (ಪ್ರಜೆಗಳು) ತಮ್ಮ ತಮ್ಮ ಮಂಟಪದಲ್ಲಿ ಸಿಲುಕಿ ಹಾಕಿಕೊಂಡಿರುವುದರಿಂದ ಅವರೇ ತಮ್ಮ ಆಧ್ಯಾತ್ಮಿಕ ಜ್ಞಾನಗಳನ್ನು – ಆಚಾರಗಳನ್ನು ಫಲಾನುಭವಿಗಳಾಗಿ ಪಡೆದುಕೊಳ್ಳಲು ಸಾಧ್ಯವಿಲ್ಲವಾದ್ದರಿಂದ; ಸಮಾಜವೇ ಈ ಜಂಗಮ ಲಿಂಗಗಳನ್ನು "ಅರ್ಹವಾದ ಮಟ್ಟ"ದಲ್ಲಿ ಇರುವಂತೆ ಒತ್ತಾಯ ಮಾಡಬೇಕಾಗಿದೆ. ಅಂತಹ ಒತ್ತಾಯವು "ಸಮಾಜ"ದಲ್ಲಿ "ತಿಳುವಳಿಕೆ"ಯಿಂದ ಬರಬೇಕಾಗಿದೆ. ಇಂತಹ ತಿಳುವಳಿಕೆ ಸಾರ್ವತ್ರಿಕವಾಗಿ ಸಮಾಜದಲ್ಲಿ ಮಾಡಬೇಕಾಗಿದೆ. (ಇಂದಿಗೆ)ಈ ನೆಲೆಯ ಚಿಂತನೆಗಳಿಗೆ 'ಜಂಗಮಲಿಂಗ'ಗಳ ಅಸ್ಥಿತ್ವಗಳನ್ನು ವಿಶ್ಲೇಷಣೆಗಳಿಗೆ ಒದಗಿಸಲು ಈ ಪಾದೋದಕ (ವರ್ಗ **IV**) ಪ್ರಸಾದಗಳ (ವರ್ಗ **V**) ಜ್ಞಾನಗಳು ಅತ್ಯಂತ ಮಾರ್ಮಿಕವಾಗಿ ಮಾರ್ಗದರ್ಶನ ಮಾಡುತ್ತದೆ. ಸಮಾಜದ ಆಧ್ಯಾತ್ಮಿಕ ಸ್ವಾಸ್ಥ್ಯ ಈ ಜಂಗಮಲಿಂಗಗಳ ಆಧ್ಯಾತ್ಮಿಕ ಮಟ್ಟದ ಮೇಲೆ ನಿಂತಿದೆ. (ವಿಶ್ವ ವಿದ್ಯಾಲಯದಲ್ಲಿ ವಿದ್ಯೆಯ ಮಟ್ಟ ಅದರ ಫಲಾನುಭವಿಗಳಿಂದ ವಿದ್ಯಾರ್ಥಿಗಳ ಪದವಿಯ ಮಟ್ಟ ಇದ್ದ ಹಾಗೆ). ಈ ರೀತಿಯ ಷಡುಸ್ಥಲ ಸಿದ್ಧಾಂತದ ತಿಳುವಳಿಕೆಗಳು ಸಾರ್ವತ್ರಿಕವಾಗಿ ಬೆಳೆಯಬೇಕಾಗಿದೆ.

ಇನ್ನು ತಾನೇ ಅಖಂಡ ಚೈತನ್ಯ ಸ್ವರೂಪಿಯಾಗಬೇಕಾದ ಸಾಧಕನು, ಈ ಪಾದೋದಕ, ಪ್ರಸಾದಗಳನ್ನು ಪಡೆದು, ತನ್ನ ಇಷ್ಟಲಿಂಗೋಪಾಸನಾ ಸಾಧನೆಯನ್ನು 'ಕ್ರಿಯಾಲಿಂಗ', 'ಭಾವಲಿಂಗ,' 'ಜ್ಞಾನಲಿಂಗ'ಗಳ ನೆಲೆಯಲ್ಲಿ ವೈಯಕ್ತಿಕವಾಗಿ ಆಚರಿಸುತ್ತಾ, ತಾನೇ 'ಸಕಾಯ', 'ಅಕಾಯ', 'ಪರಕಾಯ', ಸ್ಥಿತಿಗಳನ್ನು ಪಡೆಯುತ್ತಾನೆ. ಈ 'ಕಾಯ' ಸ್ಥಿತಿಗಳನ್ನು ಪಡೆಯುವುದು ಶಿವಯೋಗ ಸಾಧನೆಯ ಮೊದಲ ಹಂತವಾಗಿದೆ. ಈ ಸಾಧನೆ ಸಾಧಕನಿಗೆ ಅತ್ಯಂತ "ವೈಯಕ್ತಿಕ ನೆಲೆಯಲ್ಲಿ" ಅವನ ಸಾಧನೆಯಿಂದಲೇ ಅವನಿಗೇ ದೊರಕುವ ಸ್ಥಿತಿಯಾಗಿದೆ. ಈ ವಿಚಾರಗಳನ್ನೇ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವು ವರ್ಗ **V** ರಲ್ಲಿ 'ಲಿಂಗಗುರು' ವಾಗಿ ಇಷ್ಟ ಲಿಂಗೋಪಾಸನಾ ನೆಲೆಯಲ್ಲಿ ಪ್ರತಿಪಾದಿಸುತ್ತದೆ. **48, 49, 50** ಲಿಂಗ ಸ್ಥಲಗಳಲ್ಲೂ ಮತ್ತು **57, 58, 39** ಲಿಂಗ ಸ್ಥಲಗಳಲ್ಲೂ ಈ ವಿಚಾರಗಳ ವಿಚಾರಗಳು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಪ್ರತಿಪಾದಿತವಾಗಿದೆ. ಈ ವರ್ಗದಲ್ಲಿ ಆಗಿರುವ ಸಾಧಕನ ಮೇಲೆ ಆಗಿರುವ 'ಕಾಯ'ದ ಪರಿಣಾಮವು 'ಅನುಗ್ರಹ (ಶಿವನ) ಸ್ವರೂಪದಲ್ಲಿದ್ದು, ಆ ಅನುಭವವು (ಶಿವನ) "ಆತ್ಮ", "ಅಂತರಾತ್ಮ", "ಪರಮಾತ್ಮ" ಸ್ವರೂಪವಾಗಿದ್ದು, ಸಾಧಕನಿಗೆ ಶಿವಯೋಗ ಸಾಧನೆಯ "ಎರಡನೆಯ ಹಂತ"ವಾಗಿದೆ. ಈ ಆತ್ಮ, ಅಂತರಾತ್ಮ, ಪರಮಾತ್ಮ ಸ್ವರೂಪಗಲು ಜಂಗಮಸ್ವರೂಪವಾಗಿ, ಮಿಂದೆದ್ದಾಗ, ಬಿಂದ್ವಾಕಾಶ, ಮಹಾಕಾಶ ಸ್ವರೂಪದ 'ಜ್ಞಾನ ಜಂಗಮ' ಅಥವಾ ಭಾವಲಿಂಗಗಳ ಸ್ಥಿತಿಗಳಾಗಿವೆ. ನಿರಾಕರ ಲಿಂಗತತ್ತ್ವದ ಮೊದಲ ಹಂತದ

ಅನುಭಾವಗಳಾಗಿವೆ. ಈ ವರ್ಗ VII ರಲ್ಲಿನ 'ಗುರುಲಿಂಗ' ಸ್ವರೂಪದ ವಿವರಣೆಗಳನ್ನು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವು 63, 64, 65, ಲಿಂಗಸ್ಥಲಗಳಲ್ಲಿಯೂ, ಮತ್ತು 72, 73, 74 ಲಿಂಗ ಸ್ಥಲಗಳಲ್ಲಿಯೂ ಪ್ರತಿಪಾದಿಸುತ್ತದೆ. ಈ ಶಿವಯೋಗ ಸಾಧನೆಯ ಹಂತ 1, ಹಂತ 2ರ ಸಾಧನೆಗಳಿಗೆ ಪೂರಕವಾಗಿ 1 ರಿಂದ 36 ಸ್ಥಲಗಳಲ್ಲಿ ಲಿಂಗಸ್ಥಲ ಪ್ರತಿಪಾದಿತ ವಿಚಾರಗಳೂ ಸಹ ಅನುಕೂಲ ಮಾಡಿಕೊಡುತ್ತದೆ. ಇದೇ ರೀತಿಯ ಶಿವಲಿಂಗ ಸಾಧನೆಗಳು 'ಮನಮಗ್ನ ಯೋಗ' ಕುಂಡಲಿನಿಯೋಗ ಷಟ್ಚಚಕ್ರಭೇದ, ಮತ್ತು ಅರ್ಪಣ ವಿಧಾನಗಳ ಸ್ವರೂಪದಲ್ಲಿ ಮುಂದುವರೆದಂತೆಲ್ಲಾ ಸಾಧಕನು ತನ್ನ ನಿಷ್ಪತ್ತಿಗಳನ್ನು (ಲಿಂಗತತ್ತ್ವ) ಹೊಂದಿ 'ಲಿಂಗತತ್ತ್ವ' 'ಪ್ರಸಾದಿ'ಯೇ ಆಗುತ್ತಾನೆ. ಇದೇ ಸ್ಥಿತಿಗಳನ್ನೇ 'ಶ್ರೀ ಸಿದ್ಧಾಂತ ಶಿಖಾಮಣಿ' 'ಗ್ರಂಥವು' ವರ್ಗ– VII' ರ 'ಲಿಂಗ ಜಂಗಮ' ಪ್ರಸಾದವಾಗಿ ಪ್ರತಿಪಾದಿಸುತ್ತದೆ. ಈ ವಿಚಾರಗಳನ್ನು 84, 85, 86ರ ಲಿಂಗಸ್ಥಲಗಳಲ್ಲಿಯೂ ಮತ್ತು 93, 94, 95ರ ಲಿಂಗಸ್ಥಲಗಳಲ್ಲಿಯೂ ಪ್ರತಿಪಾದಿತವಾಗಿದೆ. ಈ ವಿಚಾರಗಳಿಗೆ 37 ರಿಂದ 44 ಲಿಂಗಸ್ಥಲಗಳೂ ಸಹ ಅವುಗಳಲ್ಲಿನ ವಿಚಾರಗಳ ಮೂಲಕ ಪ್ರಯೋಜನಕಾರಿಯಾಗಿದೆ. ಈ 'ಲಿಂಗ ಜಂಗಮ' ಪ್ರಸಾದವು ಸಾಧಕನಿಗೆ ಅವನ ಸಾಧನೆಗೆ 'ಸಿದ್ಧಿ' ಸ್ವರೂಪ ಪದ ಪ್ರಸಾದವಾಗಿದ್ದು; ಈ ನೆಲೆಯಲ್ಲಿ ಸಾಧಕನು ಸಾಕಾರಲಿಂಗತತ್ತ್ವ ಸ್ವರೂಪಿಯಾಗಿ 'ಶಿವ' 'ಸ್ವರೂಪಿಯಾಗಿ ಅತ್ಯಂತ ಶುದ್ಧ ಪ್ರಜ್ಞಾ (ಅರಿವಿನ) ಸ್ವರೂಪಿಯಾಗಿರುತ್ತಾನೆ. ಇಲ್ಲಿಗೆ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಪಾದೋಧಕ, ಪ್ರಸಾದಗಳ ಮೂಲಕ ಪಡೆದ, ಗುರುಜಂಗಮ; 'ಜಂಗಮ ಲಿಂಗ'ಗಳ ಮಾರ್ಗದರ್ಶನದಲ್ಲಿ ಶಿವಯೋಗ ಸಾಧನೆಯನ್ನು ವರ್ಗ VI, ವರ್ಗ VII, ವರ್ಗ VIII, ರ ಪ್ರಕಾರ ಮಾಡಿ, ಸಿದ್ಧಿ ಪಡೆದು 'ಲಿಂಗ ಜಂಗಮ' ಪ್ರಸಾದಿಯಾಗಿ ಲಿಂಗತತ್ತ್ವ ಸ್ವರೂಪಿಯೇ ಆಗುವ ಸ್ಥಿತಿಗಳನ್ನು ಇಷ್ಟಲಿಂಗ (I, II, III ವರ್ಗಗಳು) ಎಂದು 101 ಸ್ಥಲ ಪ್ರತಿಪಾದನೆಯ ಮೂಲಕ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವು ಷಟ್‌ಸ್ಥಲ ಸಿದ್ಧಾಂತದ ನೆಲೆಯಲ್ಲಿ ಪ್ರತಿಪಾದಿಸುತ್ತದೆ. ಈ ವಿಚಾರಗಳನ್ನೇ ಅನುಭಾವ ಸ್ವರೂಪದಲ್ಲಿ ಬಸವಣ್ಣನವರು ತಮ್ಮ ಒಂದು ವಚನದಲ್ಲಿ ಪ್ರತಿಪಾದಿಸುತ್ತಾರೆ. 'ಶ್ರೀ ಸಿದ್ಧಾಂತ ಶಿಖಾಮಣಿ' ಗ್ರಂಥದಲ್ಲಿ ಪ್ರತಿಪಾದಿತವಾಗಿರುವ ವರ್ಗ V, ಮತ್ತು ವರ್ಗ VI, ವರ್ಗ VII, ರ 'ಜಂಗಮಲಿಂಗ' ಮತ್ತು 'ಲಿಂಗಜಂಗಮ'ಗಳ 'ಪ್ರಸಾದ'ಗಳ ಬಗೆಗೆ ಈ ವಚನದಲ್ಲಿ ಪ್ರಸ್ತಾಪವಿದೆ ಹಾಗೂ ಈ ಪ್ರಸಾದಗಳ ಸ್ವರೂಫದ ವಿವರಣೆಗಳಿವೆ. ಈ ವಚನವು ಹೇಗೆ ಅನುಭಾವವನ್ನು ಪ್ರತಿಪಾದಿಸಿದೆ ಮತ್ತು ಈ ಅನುಭಾವವನ್ನು ಶಾಸ್ತ್ರ ಸ್ವರೂಪದಲ್ಲಿ ಹೇಗೆ ವಿವರಿಸಬೇಕೆಂಬ ಸೂತ್ರಗಳಿವೆ.

ವಚನ 3: (ಸಪ್ತ ಸೂತ್ರವಚನ)

| | |
|---|---|
| 1. 'ಪ್ರಸಾದ ಸ್ವರೂಪಗಳು | 'ಲಿಂಗ ಜಂಗಮ' 'ಜಂಗಮ ಲಿಂಗ'ವೆಂಬುದ ಎನಗೆ ತೋರಿದವರಾರಯ್ಯ? |
| 2. ಬಾಹ್ಯ ಇಷ್ಟ ಲಿಂಗ ಪೂಜೆ | ಲಿಂಗಮ ಪೂಜೆಸಿದಡೆ ಭವ ಹರಿಯದೆಂದು |
| 3. 'ಜಂಗಮಲಿಂಗ'ದ ಪ್ರಸ್ತುತತೆ | 'ಜಂಗಮಮುಖ' 'ಲಿಂಗ'ವಾಗಿ ಬಂದು ಶಿಕ್ಷಿಸಿ, ರಕ್ಷಿಸಿ, |
| '4. ಜಂಗಮಲಿಂಗ' ದ ಪ್ರಯೋಜನ | ಎನ್ನ ಆದಿ ಅನಾದಿಯ ತೋರಿ, |
| 5. ಸಾಧನೆಯ ಜಂಗಮ ತತ್ತ್ವ 'ಸ್ವರೂಪ' | 'ಪ್ರಾಣಲಿಂಗ ಜಂಗಮ'ವೆಂದು ಎನಗೆ ಪ್ರತಿಷ್ಠಿಸಿ ತೋರಿದಿರಾಗಿ, |

| | |
|---|---|
| 6. ಲಿಂಗೈಕ್ಯಸ್ಥಿತಿ. | ಕೂಡಲಸಂಗಮದೇವಾ, |
| 7. ಅನುಭಾವಿ ಶರಣ ಸಂಗದ ಪ್ರಯೋಜನ | ನಿಮ್ಮಿಂದಲಾನು ಬದುಕಿರುವೆನು ಕಾಣಾ, ಪ್ರಭುವೆ. |
| | – ಬಸವಣ್ಣನವರು, ವಚನ<br>ಪುಟ:372, ಸಮಗ್ರವಚನ<br>ಸಂಪುಟ 1, ಕ.ಸರ್ಕಾರ 1993. |

ಬಸವಾದಿ ಶರಣರು ಆಧ್ಯಾತ್ಮವನ್ನು ಹೇಳುವ ರೀತಿ ಹಾಗೂ ಆಧ್ಯಾತ್ಮದ ಅನುಭಾವವನ್ನು ಹೇಳುವ ರೀತಿ ವಿಶಿಷ್ಟವಾದುದಾಗಿದೆ. ಪಂಚಾಚಾರ ಸ್ಥಲ ಪ್ರತಿಪಾದಿತ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದಗಳ ಹಿನ್ನೆಲೆಯಲ್ಲೇ ಅವರ ವಚನಗಳ ಪ್ರತಿಪಾದನೆ ಇರುತ್ತದೆ. ಈ ಮೇಲಿನ ವಚನದಲ್ಲಿ ಕೇವಲ ಲಿಂಗ, ಜಂಗಮ ಪದಗಳ ಹಿನ್ನೆಲೆಯ 'ಲಿಂಗ ಜಂಗಮ', 'ಜಂಗಮ ಲಿಂಗ' ಗಳೆಂಬ ಪದ ಪ್ರಯೋಗವಿದೆ. ಈ ವಿಶಿಷ್ಟವಾದ 'ಲಿಂಗ ಜಂಗಮ', 'ಜಂಗಮ'ಗಳೆಂಬ ಪದಗಳನ್ನು ಸರಿಯಾದ ರೀತಿಯಲ್ಲಿ ಅರ್ಥೈಸದೆ ಈ ವಚನದ ಆಂತರ್ಯ ಅರ್ಥವಾಗುವುದಿಲಲ್. ವಚನ 1 ರಲ್ಲಿ ಪ್ರತಿಪಾದಿಸಿರುವಂತೆ "ಷಡುಸ್ಥಲ"ವೆಂಬ "ಮಹಾನುಭಾವವಂ ಕರತಲಾಮಲಕವಾಗಿ ಸ್ಥಿತಗೊಳಿಸಿ, ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದವೆಂಬ ಪಂಚಾಚಾರ ಸ್ಥಲವ ನೆಲಗೊಳಿಸಿ," ಎಂಬ ವಿಚಾರ ಹಿನ್ನೆಲೆಯಲ್ಲಿ ಈ ವಚನದಲ್ಲಿನ 'ಲಿಂಗ ಜಂಗಮ', 'ಜಂಗಮ ಲಿಂಗ' ಪದಗಳು ಏನನ್ನು ಪ್ರತಿಪಾದಿಸುತ್ತದೆ ಎಂದು ಹೇಳುವುದು ಕಷ್ಟವಾಗುತ್ತದೆ. ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿನ ಷಟ್‌ಸ್ಥಲ ಸಿದ್ಧಾಂತವನ್ನು (101 ಸ್ಥಲ ಪ್ರತಿಪಾದಿತವಾಗಿದೆ.) ನವ ವರ್ಗದ ಸಮಗ್ರ ಸಮಸಮುಚ್ಚಯ ಕ್ರಮದಲ್ಲಿ ಅರ್ಥೈಸಿದಾಗ, ಈ 'ಲಿಂಗ ಜಂಗಮ' ಹಾಗೂ 'ಜಂಗಮಲಿಂಗ' ಗುಂಪುಗಳಿ (ವರ್ಗ VIII, ಮತ್ತು ವರ್ಗ V) ಪ್ರಸಾದಗಳಾಗಿ ಪ್ರತಿಪಾದಿತವಾಗಿರುವುದು ಗಮನಕ್ಕೆ ಬರುತ್ತದೆ. ಈ ವಿಚಾರಗಳ ಹಿನ್ನೆಲೆಯಲ್ಲಿ ಬಸವಾದಿ ಶರಣರೂ ಸಹ ಈ 'ಲಿಂಗಜಂಗಮ', ಮತ್ತು 'ಜಂಗಮಲಿಂಗ' ಸ್ವರೂಪಗಳನ್ನು 'ಪ್ರಸಾದ'ವಾಗಿಯೇ, ಷಡುಸ್ಥಲ ಸಿದ್ಧಾಂತದ ಭಾಗವಾಗಿ ತಿಳೀದಿದ್ದರೆದು ಖಚಿತವಾಗಿ ಹೇಳಬಹುದಾಗಿದೆ. ಈ ಹಿನ್ನೆಲೆಗಳಲ್ಲಿ ಮೇಲಿನ ವಚನ (3)ರನ್ನು ವಿಶ್ಲೇಷಿಸಿದರೆ; ಅರ್ಥ ಹೀಗೆ ಆಗುತ್ತದೆ. "ಲಿಂಗ ಜಂಗಮ"ದಲ್ಲೂ 'ಜಂಗಮಲಿಂಗ'ಕ್ಕೂ ಇರುವ ವ್ಯತ್ಯಾಸವೆಂದರೆ, ಲಿಂಗಜಂಗಮ ಪ್ರಸಾದವೆಂದರೆ ಸಾಧಕನಿಗೆ ಅವನ ಸಾಧನೆಯ ಫಲವಾಗಿ ದೊರೆಯುವ "ಲಿಂಗತತ್ತ್ವ"ದ ಪ್ರಸಾದ ಅಂದರೆ ಅವನೇ 'ಲಿಂಗ ಸ್ವರೂಪಿ'ಯಾದ ಜಂಗಮನಿಂದ ಅಂದರೆ ಶಿವಸ್ವರೂಪಿಯಾದ 'ಜ್ಞಾನಿಯೂ ದೊರೆಯುವ ಆದಿ, ಅಂತ್ಯ ಸೆಂವು ಪ್ರಸಾದಗಳು. ಸಾಧಕನು ಇಂತಹ 'ಜಂಗಮಲಿಂಗಿ'ಯ ಶಿಷ್ಯ–ಶುಶ್ರೂಷಾ, ಸೇವ್ಯವಾಗಿರುವುದರಿಂದ ಅವನಿಗೆ ತನ್ನ ಆದಿ, ಅಂತ್ಯ ಸ್ವರೂಪಗಳು ತಿಳಿದು; ಶಿವ ಪ್ರಸಾದಿಯಾಗಿ, ತನ್ನ ಲಿಂಗತತ್ತ್ವದ ಸಾಧನೆಗೆ ಅರ್ಹತೆಯನ್ನು ಕೇವಲ ಲಿಂಗವನ್ನು ಪೂಜಿಸಿದರೆ ಭವಹರಿಯದೆಂದು (ಭವವೆಂದರೆ ಹುಟ್ಟು–ಸಾವುಗಳ ಬಂಧನದಿಂದ; ಅಂದರೆ ಲಿಂಗೈಕ್ಯ ಸ್ಥಿತಿಯಾದ ಅಖಂಡ ಚೈತನ್ಯಾತ್ಮಕ ಶಕ್ತಿ ಸ್ವರೂಪಿಯಾಗುವ ಸ್ಥಿತಿ) ಜಂಗಮ ಸ್ವರೂಪಿಯಿಂದ ಲಿಂಗ ಸ್ವರೂಪವನ್ನು ಆದಿ, ಅನಾದಿ ಸ್ಥಿತಿಗಳಿಂದ ತಿಳಿದು, ಪ್ರಾಣಲಿಂಗ ಸ್ವರೂಪವೇ ಜಂಗಮವೆಂದು ಅಂದರೆ ಪ್ರಾಣದಲ್ಲಿನ ಅಖಂಡ ಚೈತನ್ಯಾತ್ಮಕ ಶಕ್ತಿ ವಿಶಿಷ್ಟವಾದ ಅರಿವಿನ ಸ್ವರೂಫದ ಜ್ಞಾನ ಜಂಗಮದ ಅನುಷ್ಠಾನದಿಂದ ಅಂದರೆ "ಜಂಗ ಮಾರ್ಚನೆ'ಯ ಮಾಟದಿಂದ, ಸಾಧಕನು ಕೂಡಲಸಂಗನನಾಗುವ ಸ್ಥಿತಿಯನ್ನು ಪಡೆಯುತ್ತಾನೆ. ಇಂತಹ ವಿಚಾರಗಳನ್ನು ತಿಳಿದು ಸಾಧಿಸಿ ಸಾಧಕನು ಲಿಂಗಜಂಗಮ ಪ್ರಸಾದಿಯಾಗಿ ಲಿಂಗತತ್ತ್ವ ಸ್ವರೂಪಿಯಾಗುತ್ತಾನೆ. ಇಂತಹ ವಿಚಾರಗಳನ್ನು ಅನುಭಾವಿಯಾದ ಪ್ರಭುಗಳಿಂದ ತಿಳಿದೆ ಎಂದು ಬಸವಣ್ಣನವರು 'ಅನುಭಾವಿ ಶರಣ'ರನ್ನು ಪ್ರಶಂಸೆ ಮಾಡಿದ್ದಾರೆ. ಅದೂ ಅಲ್ಲದೆ ಬಸವಣ್ಣನವರು "ಶರಣರ

ಸಂಗವನ್ನು ಮತ್ತು ಅದರಿಂದಾಗುವ (ಸಾಧಕನಿಗೆ) ಪ್ರಯೋಜನಗಳನ್ನು ತಮ್ಮ ಅನೇಕ ವಚನಗಳಲ್ಲಿ ಪ್ರತಿಪಾದಿಸಿದ್ದಾರೆ. ಉದಾಹರಣೆ ಈ ವಚನ (3)ರ ಸ.ವಾದಿಯಾಗಿ ವತ್ತೊಂದು 'ವಚನ'ವನ್ನು ಉದಾಹರಿಸಬಹುದಾಗಿದೆ.

ವಚನ (4)

| | |
|---|---|
| 1. 'ಶಿವಭಕ್ತಿ ಮತ್ತು ಸಾಧನ ಮಾರ್ಗ: | "ಮಡಕೆ"ಯ ಮಾಡುವಂತೆ "ಮಣ್ಣೇ" ಮೊದಲು, "ತೊಡಿಗೆ"ಯ ಮಾಡುವಂತೆ "ಹೊನ್ನೇ" ಮೊದಲು, |
| 2. ದೀಕ್ಷೆ ಮತ್ತು ಇಷ್ಟ ಲಿಂಗ ಪ್ರಾಪ್ತ, | "ಶಿವ ಪಥ"ವನರಿವಡೆ "ಗುರುಪಥ"ವೆ ಮೊದಲು, |
| 3. ವಿಚಾರ, ಆಚಾರ, ಸಿದ್ಧಿ | ಕೂಡಲ ಸಂಗಮ ದೇವನರಿನಡೆ |
| 4. ಶರಣರ ಅನುಭಾವ | "ಶರಣರ ಸಂಗ"ವೆ ಮೊದಲು |

ವಚನ (3) ರಲಲಿ ಬಸವಣ್ಣನವರು, "ನಿಮ್ಮಿಂದಲಾದು ಬದುಕಿದೆನು ಪ್ರಭುವೆ" ಎಂದೂ ವಚನ(1)ರಲ್ಲಿ "ನೀನು ನನಗೆ ಪರಮಾರಾಧ್ಯ ಕಾಣಾಪ್ರಭುವೆ "ಎಂದೂ 'ಶರಣರ ಸಂಗ'ದ ಪ್ರಾಮುಖ್ಯತೆಯನ್ನು ಪ್ರಸ್ತಾಪಿಸಿದ್ದಾರೆ. ಈ ವಚನದ (4) ರಲ್ಲಿ 'ಗುರು ಪಥ' ಕ್ಕೂ ಮತ್ತು 'ಶರಣರ ಸಂಗ'ಕ್ಕೂ ಇರುವ ವ್ಯತ್ಯಾಸಗಳನ್ನು ಪ್ರತಿಪಾದಿಸಿದ್ದಾರೆ ಇದು ಷಟ್‌ಸ್ಥಲ ಸಿದ್ಧಾಂತವನ್ನು ಪ್ರತಿಪಾದಿಸುವ ರೀತಿಗಳಾಗಿವೆ. ಈ ನಿಟ್ಟಿನಲ್ಲಿ ಇಷ್ಟಲಿಂಗ ದೀಕ್ಷೆಯನ್ನು ಕೊಡುವವನು ಶ್ರೀ 'ಗುರು'ವಾದರೆ; ಲಿಂಗತತ್ತ್ವವನ್ನು ಸಾಧಿಸಲು ಬೇಕಾದ ಮಾರ್ಗದರ್ಶನ ಮಾಡುವವನನ್ನು ಶರಣನೆಂದು ಅಂತಹಹ 'ಶರಣಸಂಗ' ಪ್ರಮುಖವಾದುದೆಂದು ಈ ವಚನದ 'ಮುಖಾಂತರ' ಷಟ್ ಸ್ಥಲ ಸಿದ್ಧಾಂತದ ಪ್ರತಿಪಾದನೆಯನ್ನು ಮಾಡಲಾಗಿದೆ. ಇಲ್ಲಿ 'ಜಂಗಮಲಿಂಗ'ವನ್ನು ಶರಣನೆಂದು ತಿಳಿಯಬಹುದಾಗಿದೆ. ಇಂದಿನ ಸಮಾಜದಲ್ಲಿ 'ಜಂಗಮ ಲಿಂಗಗಳು' ಮೂರು ರೀತಿಯಲ್ಲಿವೆ (1) ಸ್ವಾಮಿಗಳು ಹಾಗೂ ಮಠಗಳು, (2) ವಿದ್ಯಾಂಸರುಗಳು (3) ಸಂಘಸಂಸ್ಥೆಗಳು ಹಾಗೂ ನಿಯತಕಲಿಕೆಗಳು ಇಲ್ಲಿ 'ಶರಣ'ರನ್ನು 'ಜ್ಞಾನಿ'ಗಳೆಂದೂ 'ಅನುಭಾವಿ'ಗಳೆಂದೂ, ಲಿಂಗತತ್ತ್ವವನ್ನು ಸಾಧಿಸಿರುವ 'ಸಿದ್ಧ ಪುರುಷ'ರೆಂದು ತಿಳಿಯಬಹುದಾಗಿದೆ. ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿನ ವರ್ಗ VIII ರಲ್ಲಿನ 'ಲಿಂಗ ಜಂಗಮ' ಪ್ರಸಾದಿಯಾದ 'ಸಿದ್ಧಿ' ಪಡೆದ 'ಲಿಂಗತತ್ತ್ವ' ಸ್ವರೂಪಿಯಾದ ಸಿದ್ಧಪುರುಷನು ಹೇಗೆ ಇರುತ್ತಾನೆ, ಮತ್ತು ತನ್ನನ್ನು ಹೇಗೆ ತನ್ನಲ್ಲಿ ತೊಡಗಿಸಿಕೊಂಡಿರುತ್ತಾನೆ ಎಂಬ ವಿಚಾರಗಳನ್ನು ವರ್ಗ IX, ರಲ್ಲಿ 'ಜಂಗಮ ಗುರು' ಗುಂಪಿನಲಲಿ ಪ್ರತಿಪಾದಿಸಲಾಗಿದೆ. ಇಲ್ಲಿರುವವರು ಸಿದ್ಧ ಪುರುಷನಾಗಿದ್ದಾನೆ. 51, 52, 53 ಲಿಂಗಸ್ಥಲಗಳು ಹಾಗೂ 60, 61, 62 ಲಿಂಗಸ್ಥಲಗಳು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಈ ಸಿದ್ಧ ಪುರುಷನ ಲಕ್ಷಣಗಳನ್ನು ಸ್ವಯ, ಚರ, ಪರ ಜಂಗಮನನ್ನಾಗಿ ನಿರೂಪಿಸಿದೆ, ಹಾಗೂ ಅವನ ವೈಯಕ್ತಿಕ ಆಚರಣೆಗಳನ್ನು ಧರ್ಮಚಾರ, ಭಾವಾಚಾರ, ಜ್ಞಾನಾಚಾರಗಳನ್ನಾಗಿ ನಿರೂಪಿಸಿದೆ. ಇಂತಹ ಜ್ಞಾನಿಯು ತನ್ನ ಸಿದ್ಧಿ ಸ್ಥಿತಿಯಲ್ಲಿದ್ದು; ಜ್ಞಾನಿಯಾಗಿ, ಶಿವ ಸ್ವರೂಪದ ಅನುಭಾವಿಯಾಗಿ, ತನ್ನ 'ಲೋಕ ಸಂಗ್ರಹ' ಕಾರ್ಯದಲ್ಲಿ ತನ್ನನ್ನು ತಾನು ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ ತೊಡಗಿಸಿಕೊಂಡಿರುತ್ತಾನೆ. ಈ ಸ್ಥಿತಿಯೇ ಬಸವಾದಿ ಶರಣರು ಗುರುತಿಸಿರುವ ಶಿವಯೋಗಿಯ ಸ್ಥಿತಿ ಅಥವಾ ಶರಣ ಸ್ಥಿತಿಯಾಗಿದ್ದಾನೆ. ಇಂತಹ ಜಂಗಮಗುರು ಸ್ವರೂಪಿಯಾದವನು ದೀಕ್ಷೆ ಕೊಡುವಾಗ, ಗುರುವಾಗಿಯೂ, ಶಿಕ್ಷೆ ಮಾರ್ಗದರ್ಶನ ಮಾಡುವಾಗ 'ಜಂಗಮ' ಸ್ವರೂಪಿಯಾಗಿಯೂ, ಶಿಕ್ಷೆ ಮಾರ್ಗದರ್ಶನ ಮಾಡುವಾಗ 'ಜಂಗಮ' ಸ್ವರೂಪಿಯಾಗಿಯೂ (ಜಂಗಮಲಿಂಗಿ)ಯಾಗಿಯೂ ಇದ್ದಾನೆ. ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಈ ನವ ವರ್ಗಗಳ ನಿರೂಪಣೆಯನ್ನು ನವ ವರ್ಗಗಳಲ್ಲೂ; ಹಾಗೂ ಕ್ರಮ ಸಮೂಚ್ಛಯದಲ್ಲೂ ನಿರೂಪಣೆಯಾಗಿದೆ. (ಚಿತ್ರ 5ರಲ್ಲಿ

ನಿರೂಪಿತವಾಗಿರುವಂತೆ), ಈ ಕ್ರಮ ಸಮುಚ್ಛಯದಲ್ಲಿ ವರ್ಗ I, ಮತ್ತು ವರ್ಗ VI, ವರ್ಗ IX ಕ್ರಮವಾಗಿ ಭಕ್ತ ಮಹೇಶ ಸ್ಥಲಗಳಾಗಿ ಬರುತ್ತದೆ. ಹಾಗೆಯೇ ವರ್ಗ VII, ವರ್ಗ II, ವರ್ಗ V, ಪ್ರಸಾದಿ, ಪ್ರಾಣವಾಗಿ ಸ್ಥಲಗಳಾದಿ, ಮತ್ತು ವರ್ಗ IV, ವರ್ಗ VIII, ವರ್ಗ III, ಶರಣ, ಐಕ್ಯಸ್ಥಲವಾಗಿ ಪ್ರತಿಪಾದಿತವಾಗಿಯೆ, ಈ ಕ್ರಮದಲ್ಲಿ ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ ಶರಣ, ಐಕ್ಯ ಸ್ಥಲ ಸ್ವರೂಪದಲ್ಲಿ ಅರ್ಥೈಸಿದರೆ, ಸಾಧಕನು ತನ್ನ ಸಾಧನೆಯಲ್ಲಿ ಮುಂದುವರೆಯುತ್ತಾನೆ. ಅಂದರೆ ಎಲ್ಲಾ ಸ್ಥಲಗಳ ಸಾಧನೆಯಲ್ಲಿ ಗುರು ಸ್ವರೂಪದಿಂದ ಲಿಂಗಸ್ವರೂಪಕ್ಕೂ ಮತ್ತು ಜಂಗಮ ಸ್ವರೂಪಕ್ಕೂ ಪ್ರಗತಿ ಸಾಧಿಸುತ್ತಾನೆ. ಅಂದರೆ 45, 46, 47, ರಿಂದ 48, 49, 50 ಕ್ಕೂ ನಂತರ 51, 52, 53 ಸ್ಥಲಗಳಿಗೆ, ಗುರು, ಲಿಂಗ, ಜಂಗಮ ಸ್ವರೂಪದಲ್ಲಿ ಪ್ರಗತಿ ಸಾಧಿಸುತ್ತಾನೆ. ಇದು ಭಕ್ತ ಸ್ಥಲದ ಆಚರಣೆಗಳಾದರೆ; ಇದಕ್ಕೆ ಪರಿಣಾಮಕಾರಿಯಾಗಿ 54, 54, 56 ರಿಂದ 57, 58, 59 ಕ್ಕೂ ನಂತರ 60, 61, 62ಕ್ಕೂ ಪ್ರಗತಿ ಸಾಧಿಸುತ್ತಾನೆ. ಅಂದರೆ ವರ್ಗ I, ಮತ್ತು ವರ್ಗ VI, ವರ್ಗ IX ರ ರೀತಿಯಲ್ಲಿ ಈ ಪ್ರಗತಿಯನ್ನು ಗಮನಿಸಿದರೆ; ಪರಿಣಾಮದಲ್ಲಿ ಅದು ಅಷ್ಟು ಸಮಂಜಸವಾದ ಪರಿಣಾಮಕಾರಿಯಾದ ಪ್ರಗತಿಯಾಗಿರುವುದಿಲ್ಲ. ಉದಾಹರಣೆ: ವರ್ಗ VIರಲ್ಲಿನ "ಮದಮಗ್ನ ಯೋಗ'ದ ಸಾಧನೆ ವರ್ಗ Vರಿಂದ ಆದಿ, ಅಂತ್ಯ ಸೇವ್ಯ ಪ್ರಸಾದಿಯಾಗಿ ಒಂದು ವರ್ಗ VIರ ಆಚರಣೆ, ವರ್ಗ Vರ ರಿಂದ ಬಂದು ಆಚರಿಸುವುದು ಹೆಚ್ಚು ಸೂಕ್ತವಾಗಿದೆ. ಆದ್ದರಿಂದ ವರ್ಗ I ರಿಂದ ಬಂದು ಅದರ ಹಿನ್ನೆಲೆಯಲ್ಲಿ ವರ್ಗ VIರ ಆಚರಣೆ, ಪರಿಣಾಮದಲ್ಲಿ ಅಷ್ಟು ಹೆಚ್ಚಿನ ಸಕಾಯ, ಅಕಾಯ, ಪರಕಾಯ ಸ್ಥಿತಿಗಳನ್ನು ಕೊಡುವುದಿಲ್ಲ. ಈ ವಿಚಾರವನ್ನೇ ವಚನ (3) ರಲ್ಲಿ 'ಲಿಂಗವ ಪೂಜಿಸಿದರೆ ಭವ ಹರಿಯದೆಂದು ಜಂಗಮ ಮುಖವಾಗಿ ಲಿಂಗವಾಗಿ ಬಂದು ಎನ್ನ ಆದಿ, ಅನಾದಿಯ ತೋರಿ, ಪ್ರಾಣ ಲಿಂಗವೆ ಜಂಗಮವೆಂದು ಪ್ರತಿಷ್ಠಿಸಿ ತೋರಿದಿರಾಗಿ" ಎಂಬ ವರ್ಗ VIರ ಸಾಧನೆಯನ್ನೇ ವರ್ಗ Vರಿಂದ ಬಂದು ಆಚರಿಸುವ ಕ್ರಮವನ್ನು ಬೋಧಿಸುತ್ತದೆ. ಇಲ್ಲಿ ಗಮನಿಸಬೇಕಾದ ಒಂದು ಮುಖ್ಯವಾದ ಸಂತ್ರವಿದೆ. ಕೇವಲ ಶಾಸ್ತ್ರದ ಹಿನ್ನೆಲೆಯಲ್ಲಿ ವಿಚಾರಗಳನ್ನು ಗ್ರಹಿಸಿದರೆ, ಅಲ್ಲಿಂದ ಸಾಧಕನು ಹೆಚ್ಚನ ಪ್ರಯೋಜನಗಳನ್ನು ಪಡೆಯುವುದಕ್ಕಿಂತ ಅನುಭಾವದ ಹಿನ್ನೆಲೆಯಲ್ಲಿ; ಶಾಸ್ತ್ರವನ್ನು ಗ್ರಹಿಸಿದರೆ; ಅನುಭಾವಗಳೂ ಹಾಗೂ ಶಾಸ್ತ್ರ' ಎರಡೂ ಸಹ ಹೆಚ್ಚಿನ ಪರಿಣಾಮಕಾರಿ ಪ್ರಯೋಜನಗಳನ್ನು ಸಾಧಕನಿಗೆ ಒದಗಿಸುತ್ತದೆ. ಹೀಗೆ ಅನುಭಾವಗಳ ಹಿನ್ನೆಲೆಯಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿನ ಶಾಸ್ತ್ರವನ್ನು ಗ್ರಹಿಸಿದರೆ, ಒಂದು ವಿಚಾರ ಸ್ಪಷ್ಟತೆಗೆ ಬರುತ್ತದೆ. ಈ ಗ್ರಂಥದಲ್ಲಿ ಶಾಸ್ತ್ರವು (1) ನಿರೂಪಣಾ ಕ್ರಮ (1 ರಿಂದ 101 ಸ್ಥಲಗಳು) ಹಾಗೂ (2) ಅರ್ಥೈಸುವಿಕೆಯ ಕ್ರಮ (ನವವರ್ಗದ ಸಮಗ್ರ ಸಮುಚ್ಛಯ ಕ್ರಮ) ಎಂದು ಎರಡು ರೀತಿಯಲ್ಲಿರುವುದು ಗಮನಕ್ಕೆ ಬರುತ್ತದೆ. ಶ್ರೀ ಶಿವಯೋಗಿ ಶಿವಾಚಾರರು ತಮ್ಮ ಗ್ರಂಥ ರಚನೆಯ ಚೌಕಟ್ಟನ್ನು ಷಟ್‌ಕೋನ ಪ್ರಕ್ರಿಯೆಗಳಿದ ಪಡೆದು (ಚಿತ್ರ 7 ಆಧಾರ) ಆಯಾ ಸಂದರ್ಭಗಳಿಗೆ ತಕ್ಕಂತೆ ಸ್ಥಲಗಳನ್ನು ಹಾಗೂ ವಿಚಾರಗಳನ್ನು ಅಳವಡಿಸಿ, ತದನಂತರದಲ್ಲಿ ಇಡೀ ಷಟ್‌ಸ್ಥಲ ಸಿದ್ಧಾಂತವನ್ನು 101 ಸ್ಥಲ ಕ್ರಮದಲ್ಲಿ ನಿರೂಪಿಸಿ, ಅದಕ್ಕೆ ಮೊದಲ ನಾಲ್ಕು ಪರಿಚ್ಛೇದ ಹಾಗೂ ಕಡೆಯ ಪರಿಚ್ಛೇದದಲ್ಲಿ ಪೌರಾಣಿಕ ವಿಚಾರಗಳನ್ನು ತಾತ್ವಿಕ ಸ್ವರೂಪದಲ್ಲಿ ಸೇರಿಸಿ, ಒಟ್ಟಿನಲ್ಲಿ 21 ಪರಿಚ್ಛೇದದ 'ದಾರ್ಶನಿಕ ಮಹಾ ಕಾವ್ಯ'ವನ್ನು ವಿರಚಿಸಿ ಸೃಜಿಸಿದ್ದಾರೆ. "ಕಾವ್ಯ ದೃಷ್ಟಿ"ಯಿಂದ ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿ ಬಂದಿರುವ ಮೊದಲನೆಯ ಪರಿಚ್ಛೇದದಲ್ಲಿನ 'ಕವಿ–ಕಾವ್ಯ' ವಿಚಾರ (12 ಶ್ಲೋಕಗಳು); ಎರಡನೆಯ ಪರಿಚ್ಛೇದದಲ್ಲಿರುವ ಸೃಷ್ಟಿ ವಿಚಾರದ ಮಂಗಳಾಚರಣೆ, ವಸ್ತು ನಿರ್ದೇಶನ, ಪ್ರಥಮ ಸೃಷ್ಟಿ (33 ಶ್ಲೋಕಗಳು); ಮೂರನೆಯ ಪರಿಚ್ಛೇದದ, ಕೈಲಾಸ ವರ್ಣನೆ, ಸಿಂಹಾಸನಾಸೀನನಾದ ಪರ ಶಿವನ ವರ್ಣನೆ, ಶಕ್ತಿ ವರ್ಣನೆ, ದೇವತಾ ಸೇವಾ ವರ್ಣನೆ, ಪರಮೇಶ್ವರನ ರಾಜ ವ್ಯಾಪಾರ ವರ್ಣನೆ, ಶ್ರೀ ರೇಣಕರ ವಿಜ್ಞಾಪನೆ

(ಶಿವನಲ್ಲಿ); ರೇಣುಕರ ಅವತಾರ ಕಾರಣ (ಒಟ್ಟು: 88 ಶ್ಲೋಕಗಳು) ನಾಲ್ಕನೆಯ ಪರಿಚ್ಛೇದದಲ್ಲಿನ ಶ್ರೀ ರೇಣುಕರ ಭೂಲೋಕಾವತರಣ, ಮಲಯಾಚಾರ್ವರ್ಣನೆ; ಅಗಸ್ತ್ಯ ಮುನಿವರ್ಣನೆ, ಶ್ರೀ ರೇಣುಕ ಪೂಜಿತ ಶ್ರೀ ರೇಣುಕಾಗಸ್ತ್ಯ) ಕುಶಲ ಪ್ರಶ್ನ, ಅಗಸ್ತ್ಯ ಪ್ರಾರ್ಥನಾ ( ಒಟ್ಟು ೫೫ ಶ್ಲೋಕಗಳು) ಹಾಗೂ ಐದನೆಯ ಪರಿಚ್ಛೇದದ ಸಿದ್ಧಾಂತ ಕಥನಭಾವ (ಒಟ್ಟು 30 ಶ್ಲೋಕಗಳು) ಹಾಗೂ ಪ್ರಥಮ ಪರಿಚ್ಛೇದ ಶಿವ ಸ್ತುತಿಗಳು (ಹನ್ನೆರಡು ಶ್ಲೋಕಗಳು) ಮತ್ತು ಕೊನೆಯದಾದ ಇಪ್ಪತ್ತೊಂದನೆಯ ಪರಿಚ್ಛೇದ ವಿಭೀಷಣವರ ಪ್ರಧಾನ ಒಟ್ಟು 24 ಶ್ಲೋಕಗಳು ಇವೆಲ್ಲವೂ ಕಾವ್ಯಮಯವಾಗಿದ್ದು, ಅತ್ಯಂತ ಗೂಢವಾದ ತಾತ್ವಿಕ ವಿಚಾರಗಳನ್ನು ಪೌರಾಣಿಕವಾಗಿ ಪ್ರತಿಪಾದಿಸುತ್ತದೆ. ಕಾವ್ಯ ದೃಷ್ಟಿಯಿಂದ ಉತ್ತಮವಾದ ಮಹಾಕಾವ್ಯದ ಲಕ್ಷಣ ಸಹಿತ, ಅನುಷ್ಟಪ ಛಂದಸ್ಸು, ಹಾಗೂ ವೃತ್ತಗಳಿಂದ ( ಅನೇಕ ರೀತಿಯ) ಕೂಡಿದ ಅದ್ಭುತವಾದ ಕಲ್ಪನಾ ಶಕ್ತಿಯಿಂದ ರಚಿಸಲ್ಪಟ್ಟು; ಇತರೇ ಕಾಳಿದಾಸ, ಭವಭೂತಿ, ಬಾಣ, ಮುಂತಾದವರ ಕಾವ್ಯಗಳು ಸಾಲಿನಲ್ಲಿ ನಿಲ್ಲಬಲ್ಲಂತಹ ನಿರೂಪಣೆಗಳನ್ನು ಹೊಂದಿದೆ. ಸುಲಲಿತವಾದ ಸಂಸ್ಕೃತ ಭಾಷೆ, ಸಾಹಿತ್ಯಪೂರ್ಣ ಶಬ್ಧ ಪ್ರಯೋಗ, ಈ ಸಂಸ್ಕೃತ ಭಾಷೆಯ ಉಚ್ಚಾರಣೆಯಿಂದ ನಾಲಿಗೆ ಹಾಗೂ ವಾಕ್ ಶುದ್ಧಿ; ವಾಚಕರಿಗೆ ಈ ಗ್ರಂಥದ ಬಾಯಿ ಪಾಠದಿಂದ ಒಳ್ಳೆಯ ಸ್ಮರಣ ಶಕ್ತಿಯ ವೃದ್ಧಿ; ಮುಂತಾದ ಅನೇಕ ವಿಚಾರಗಳನ್ನು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥ ಹೊಂದಿದೆ. ಇನ್ನು ಐದನೆಯ ಪರಿಚ್ಛೇದದಿಂದ; ಇಪ್ಪತ್ತನೆಯ ಪರಿಚ್ಛೇದದವರೆವಿಗೆ; ಪಿಂಡ ಸ್ಥಲದಿಂದ ಮೊದಲು ಮಾಡಿಕೊಂಡು ಜ್ಞಾನಶೂನ್ಯ ಸ್ಥಲದವರೆಗಿನ 101 ಸ್ಥಲಗಳಲ್ಲಿ ವೀರಶೈವ ಧರ್ಮ ಪ್ರತಿಪಾದಿತವಾದ, ಇಷ್ಟ ಲಿಂಗೋಪಸನಾ ಆಧಾರಿತವಾದ ಷಟ್‌ಸ್ಥಲ ಸಿದ್ಧಾಂತ ನಿರೂಪಣೆಯನ್ನು ನೇರವಾಗಿ, ಮತ್ತು ಪಂಚಾಚಾರ, ಅಷ್ಟಾವರಣಗಳನ್ನು ಪರೋಕ್ಷವಾಗಿ "ದಾರ್ಶನಿಕ ಕಾವ್ಯ" ಸ್ವರೂಪದಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ನಿರೂಪಿತವಾಗಿದೆ. ಒಟ್ಟಿನಲ್ಲಿ ಶ್ರೀ ಸಿದ್ದಾಂತ ಶಿಖಾಮಣಿ ಗ್ರಂಥವನ್ನು ಅಧ್ಯಯನ ಮಾಡುವುದರಿಂದ ಓದುಗರಿಗೆ ಸುಸಂಸ್ಕೃತ ಮನಸ್ಸು ಉಂಟಾಗುವುದಲ್ಲದೆ, ಕಲ್ಪನಾ ವಿಲಾಸ ಮನವು ಉಂಟಾಗಿ, ಸಾಧಕನಾಗಿ ತನ್ನ ದೇಹದಲ್ಲೇ ದೈವಸಾಕ್ಷಾತ್ಕಾರ (ಶಿವ ಸಾಕ್ಷಾತ್ಕಾರ) ಮಾಡಿಕೊಳ್ಳುವ ಎಲ್ಲಾ ವಿವರಗಳನ್ನು ಹೊಂದಿದೆ. ಇನ್ನು ಈ ಗ್ರಂಥದಲ್ಲಿರುವ ದರ್ಶನದ ವಿಚಾರವು; ಶ್ರೀ ಮದ್ಭಗವದ್ಗೀತೆಗಿಂತ ಅತ್ಯಂತ ಪ್ರಬುದ್ಧವಾಗಿದ್ದು; ಆಧ್ಯಾತ್ಮಿಕವಾಗಿ ಶ್ರೀಮದ್ಭಗವದ್ಗೀತೆಯ ಮುಂದುವರೆದ ಭಾಗವಾಗಿದೆ. ಶ್ರೀ ಮದ್ಭಗವದ್ಗೀತೆಯು ವೇದಾಂತಗಳ (ವೇದ, ಉಪನಿಷತ್ತುಗಳು, ಬ್ರಹ್ಮ ಸೂತ್ರ) ಸಾರ ಗ್ರಂಥವಾದರೆ, ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವು ಎಲ್ಲಾ (ಆಗಮಗಳ), ಸಿದ್ಧಾಂತಗಳ ಸಾರವಾಗಿದೆ. ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಪ್ರತಿಪಾದಿತವಾಗಿರುವ 101 ಸ್ಥಲ ಪ್ರತಿಪಾದಿತ ಷಟ್ ಸ್ಥಲ ಸಿದ್ಧಾಂತವನ್ನು 'ನವ ವರ್ಗದ ಸಮಗ್ರ ಸಮ ಸಮುಚ್ಛಯ ಕ್ರಮ'ದಲ್ಲಿ ಗ್ರಹಿಸಿದಾಗ; ಗ್ರಂಥದಲ್ಲಿ ಪ್ರತಿಪಾದಿತವಾಗಿರುವ ಈ ಷಟ್‌ಸ್ಥಲ ಸಿದ್ಧಾಂತವನ್ನು (ಷಡುಸ್ಥಲವೆಂದು ಮಹಾನುಭಾವ ಮುಂ. ಕಲತಲಾಮಳಕವಾಗಿ ಸ್ಥಿತಗೊಳಿಸಿ, ವಚನ1) 'ಪಂಚಾಚಾರ ಸ್ಥಲ'ಗಳ ನೆಲೆಯಲ್ಲಿ ಧರ್ಮ (ಪಂಥ) ನಿರಪೇಕ್ಷವಾಗಿ ಗ್ರಹಿಸಲು ಅನುಕೂಲವಾಗುತ್ತದೆ. ಈ ಕ್ರಮದಿಂದ ಯಾವುದೇ ಒಬ್ಬ ಸಾಧಕನು ತನ್ನ ದೇಹದಲ್ಲಿನ ದೈವ (ಲಿಂಗತತ್ತ್ವದ) ಸಾಕ್ಷಾತ್ಕಾರವನ್ನು ಹೇಗೆ ಹಂತ ಹಂತವಾಗಿ ಮಾಡಿಕೊಳ್ಳಬೇಕೆಂಬ ವಿವರಗಳು ಸ್ಪಷ್ಟವಾಗಿ ಗ್ರಂಥದ ಅಧ್ಯಯನದಿಂದ ದೊರೆಯುತ್ತದೆ. ಈ ಕ್ರಮಗಳ ವಿಚಾರಗಳ ಹಿನ್ನೆಲೆಯಲ್ಲಿ ಬಸವಾದಿ ಶರಣರ ವಚನ ವಾಙ್ಮಯದಲ್ಲಿನ ಅನುಭಾವವನ್ನು "ಲಿಂಗ ತತ್ತ್ವ"ದ ಹಿನ್ನೆಲೆಯಲ್ಲಿ ಲಿಂಗತತ್ತ್ವ ಸಾಧನೆಯನ್ನು ಲಿಂಗತತ್ತ್ವದ ಹಿನ್ನೆಲೆಯಲ್ಲಿ ಸಾಮಾಜಿಕ ನ್ಯಾಯಗಳನ್ನು "ಪಡೆಯುವ ಕ್ರಮಗಳನ್ನು ವಿಷದೀಕರಣಗಳಿಗೆ ತರಬಹುದಾಗಿದೆ. ಇಲ್ಲಿ ಕೆಲವು ಉದಾಹರಣೆಗಳಾಗಿ "ವಚನ" ವಿಶ್ಲೇಷಣೆಗಳನ್ನು ಶ್ರೀ ಸಿದ್ದಾಂತ ಶಿಖಾಮಣಿ "ಗ್ರಂಥದಲ್ಲಿನ "ಶಾಸ್ತ್ರದ' ಹಿನ್ನೆಲೆಯಲ್ಲಿ (ನವ ವರ್ಗದ ಸಮಗ್ರ ಸಮ ಸಮುಚ್ಛಯ ಕ್ರಮದ ಷಟ್ ಸ್ಥಲ ಸಿದ್ದಾಂತದ ಹಿನ್ನೆಲೆಯಲ್ಲಿ) ಇಲ್ಲಿ ನಿರೂಪಿಸಲಾಗಿದೆ. ಈ ವಚನ ವಿಶ್ಲೇಷಣೆಗಳಲ್ಲಿ ಶಾಸ್ತ್ರ ಸ್ವರೂಪದ ಅನೇಕ ಪಾರಿಭಾಷಿಕ ಪದಗಳನ್ನು ಅನಿವಾರ್ಯವಾಗಿ

ಉಪಯೋಗಿಸಲಾಗಿದೆ. ಈ ಪದಗಳು ತಾಂತ್ರಿಕ ಸ್ವರೂಪದ್ದಾಗಿದ್ದು ಅವು ಷಟ್‌ಸ್ಥಲ ಸಿದ್ಧಾಂತ ನಿರೂಪಣೆಗಳಲ್ಲಿ ಉಪಯೋಗಿಸಲಾಗಿದೆ.

ವಚನ (5) (ಸಪ್ತಸೂತ್ರ) "6: ಲಿಂಗ ತತ್ತ್ವದ ಹಿನ್ನೆಲೆಯಲ್ಲಿ ಲಿಂಗತತ್ತ್ವದ ಸಾಧನೆ"

| | |
|---|---|
| 1.ಗುರುವಿನ ಮಾರ್ಗದರ್ಶನ | ಗುರುವಿನಲ್ಲಿ 'ಸದಾಚಾರ': ಲಿಂಗದಲನುದಿನ ವೇಳೆ |
| 2.ಜಂಗಮಾರ್ಚನೆ ಸಮಯಾಚಾರ | ಜಂಗಮದಲ್ಲಿನುಭಾವ 'ಸಮಯಾಚಾರ': |
| 3.ಲಿಂಗ ಪೂಜೆಯ ವೇಳೆ ಗುರುವಿನ ಮಾರ್ಗದರ್ಶನ | ಈ ಉಭಯಾಚಾರದಿಂದ ತಿಳಿದ ತಿಳಿವು ಲಿಂಗದಲ್ಲಿ |
| 4.ಗುರುವಿನ ಮಾರ್ಗದರ್ಶನದಲ್ಲಿ ಜಂಗಮಾರ್ಚನೆಯ ಮೂಲಕ ತಿಳಿದ ತಿಳಿವು | ಅನುದಿನ ವೇಳೆ |
| 5.ಪದಾಚಾರ ಸಮಯಾಚಾರ ಒಂದಾದ ಸತಿ | ಬೇರೆ ತೋರಲಿಲ್ಲ. |
| 6. ಲಿಂಗ ಜಂಗಮ ಪ್ರಸಾದದಿಂದ ಸಮಯಾಚಾರ | 'ಲಿಂಗ ಜಂಗಮ'ದಲ್ಲಿ ಲೀಯವಾಚಾಚಾರ 'ಸಮಯಾಚಾರ' |
| 7. ಲಿಂಗೋಕ್ಯ ಸ್ಥಿತಿ, ಲಿಂಗದಲ್ಲಿನ ಪೂಜಾ ಫಲ, ಪರಿಣಾಮ ಸ್ಥಿತಿ | ಇದು ಶರಣ ಕೂಡಲ ಸಂಗಮ ದೇವಾ, ಲಿಂಗದಲನುದಿನ ವೇಳೆ |
| | – ಬಸವಣ್ಣನವರು, ವಚನ 820,<br>ಪುಟ 210, ಸ.ವ.ಸಂ.1.<br>ಕ.ಸರ್ಕಾರ 1993. |

ಈ ವಚನದಲ್ಲಿ ಪ್ರಮುಖವಾಗಿ ಸದಾಚಾರ, ಸಮಯಾಚಾರಗಳನ್ನು ಬಸವಣ್ಣನವರು ಪ್ರತಿಪಾದಿಸುತ್ತಾರೆ. 'ಗುರು ತತ್ತ್ವ' ಸಂಬಂಧಿಯಾದ ಎಲ್ಲಾ ಕ್ರಿಯೆಗಳಿಗೂ, 'ಸದಾಚಾರವಾಗಿದೆ'. ಶಕ್ತಿ ವಿಶಿಷ್ಟ ಚೈತನ್ಯ ಸ್ವರೂಪದ ಅರಿವು ಪ್ರಾಣದ ಜೊತೆಯಲ್ಲಿದ್ದಾಗ ಅದು 'ಜಂಗಮ ಸ್ವರೂಪನಾಗಿದ್ದು'; ಅದರ ಅನುಭಾವ ಸಮಯಾಚರವಾಗಿದೆ. ಸಾಧಾನುಕ್ರನ್ನ ಲಿಂಗ (ಇಷ್ಟಲಿಂಗ) ಪೂಜೆಯ ವೇಳೆಯಲ್ಲಿ ಅನುದಿನ ಈ ಸದಾಚಾರ, ಸಮಯಾಚಾರಗಳಲ್ಲಿ ತೊಡಗಿಕೊಂಡಿರಬೇಕು, ಕಾರಣ ಈ ಆಚಾರಗಳ ಮೂಲಕವೇ ಸಾಧಕನು ಅಖಂಡ ಚೈತನ್ಯಾತ್ಮಕ ಶಕ್ತಿ ಸ್ವರೂಪಿಯಾಗಿ, ಲಿಂಗತತ್ತ್ವವೇ ಆಗಿ, 'ಲಿಂಗಾಂಗ ಸಾಮರಸ್ಯ' ಮುಕ್ತಿಯನ್ನು ಪಡೆಯಬೇಕಾಗಿದೆ. ಈ "ಗುರುತತ್ತ್ವ", "ಜಂಗಮ ತತ್ತ್ವ"ಗಳು ಉಸಾಧಿತವಾಗಿ ಹಾಗೂ ನಿರುಪಾದಿಕವಾಗಿ ಇವೆ. ನಿರುಪಾದಿತವೆಂದರೆ ತತ್ತ್ವ; ಉಪಾಧಿಕವೆಂದರೆ ಆ ತತ್ತ್ವಾಧಾರಿತ ವ್ಯಕ್ತಿಗಳಾಗಿದ್ದಾರೆ. 36 ತತ್ತ್ವಗಳ ಸ್ವರೂಪದಲ್ಲಿ ಗುರು ತತ್ತ್ವವು ನಿರಾಕಾರ ಸ್ವರೂಪದಲ್ಲಿದ್ದು, ನಿಷ್ಕಲ; ಶೂನ್ಯ, ನಿಃ ಶೂನ್ಯ; ಹಾಗೂ ಸಹಜ ಸ್ಥಿತಿಗಳಲ್ಲಿನ ಲಿಂಗತತ್ವವಾಗಿರುತ್ತದೆ. ಇವು ಸಹ ಸಹಸ್ರಾರ, ಶಿಖಾ, ಪಶ್ಚಿಮ ಮತ್ತು ಅಣು ಚಕ್ರಗಳಲ್ಲಿನ ಲಿಂಗತತ್ತ್ವ ಸ್ವರೂಪಗಳಾಗಿವೆ. ಇವೆಲ್ಲವನ್ನೂ

ಒಟ್ಟಿಗೆ 'ಪರಶಿವ'ನೆಂದು ಕರೆಯಲಾಗಿದೆ. ಈ 'ನಿರಾಕಾರ ಸ್ಥಿತಿ'ಯಲ್ಲಿನ ಪರಶಿವ ತತ್ತ್ವವೇ ಸಾಕಾರಗೊಂಡಾಗ 'ಶಿವ' ತತ್ತ್ವವಾಗಿದ್ದು, ಅದು ಶಕ್ತಿ ತತ್ತ್ವದೊಡಗೂಡಿ, ಪರಸ್ಪರ ಅವಿನಾಭಾವ ಸಂಬಂಧದಿಂದ ಇರುತ್ತದೆ. ಬಸವಾದಿ ಶರಣರು ತಮ್ಮ ವಚನಾಂಕಿತಗಳನ್ನು ಅಂದರೆ, ಈ ವಚನದಲ್ಲಿನ 'ಕೂಡಲಸಂಗಮದೇವ' ಎಂಬ ಸಿದ್ಧಾಂತ 'ಶಿವ–ಪರಶಿವ' ಸ್ಥಿತಿಗಳನ್ನು ಪ್ರತಿಪಾದಿಸುತ್ತದೆ. ಈ ಮೇಲಿನ ವಚನದ ಆಂತರ್ಯ; "ಗುರುತತ್ತ್ವ"ದ ಮಾರ್ಗದರ್ಶನದಲ್ಲಿ ಸಾಧಕನು "ಜಂಗಮಾರ್ಚನೆ"ಯನ್ನು ಮಾಡಿ, "ಲಿಂಗೈಕ್ಯ" ಸ್ಥಿತಿಯನ್ನು ಪಡೆಯಬೇಕು ಎಂಬ ಮಾತಿದೆ. ಈ ಸಂದರ್ಭ ಸಾಧಕನ ಇಷ್ಟಲಿಂಗ ಪೂಜಾ ಸಂದರ್ಭವಾಗಿರುವುದರಿಂದ (ಲಿಂಗದಲಮದಿನ ವೇಳೆ) ಇಲ್ಲಿ ಗುರುತತ್ತ್ವ; ಜಂಗಮತತ್ತ್ವಗಳು ನಿರೂಪಾಧಿಕ ತತ್ತ್ವಗಳಾಗಿದ್ದು; ಸದಾಚಾರ, ಸಮಯಾಚಾರ ಸಂಬಂಧಿಯಾಗಿದೆ. ಇಲ್ಲಿ ಗುರುತತ್ತ್ವ ಸಂಬಂಧಿಯೆಂದರೆ ಸಾಧಕನ 'ತನು'ವಿನ ದಂಡನೆಯಾಗಿದೆ. ಲಿಂಗಪೂಜೆಗೋಸ್ಕರ ದೇಹ ದಂಡನೆ, 'ಶಿವಪೂಜೆ' ಮಾಡಲು ಬೇಕಾದ ಸಾಮಗ್ರಿಗಳನ್ನು ಹೊಂಚುವುದು ಮುಂತಾದವುಗಳು. ಅಂಗರಂಗದ ಅರಿವು ಗುರುತತ್ತ್ವದ್ದು.ಅದು ಸಾಧಕನಲ್ಲಿನ ಶಿವಭಕ್ತಿಯಿಂದ ಅಂಕುರತೆಯನ್ನು ಪಡೆದು, ಕ್ರಮೇಣ ಅದು ಬಲಿತು 'ಪ್ರಬುದ್ಧ' ಸ್ಥಿತಿಯಲ್ಲಿ ಅವನಿಗೆ ಅವನ 'ಲಿಂಗತತ್ತ್ವ' ಸಾಧನೆಯಲ್ಲಿ ಮಾರ್ಗದರ್ಶನ ಮಾಡುತ್ತದೆ. ಈ ಸಾಧಕನಲ್ಲಿನ ಈ ನಿಷ್ಕಲ ಲಿಂಗ ಸ್ವರೂಪವೇ ಅವನ 'ಗುರುತತ್ತ್ವ'ವಾಗಿದೆ. ಉಪಾಧಿಕ ಗುರುವು ಸಾಧಕನಲ್ಲಿನ ಈ 'ನಿರುಪಾಧಿಕ ಗುರುತತ್ತ್ವ'ವನ್ನು ಜಾಗ್ರತಗೊಳಿಸಬೇಕು. ಈ ಸಾಧಕನಲ್ಲಿನ ನಿರುಪಾಧಿಕ ಗುರುತತ್ತ್ವವು ಮತ್ತು ಅದರ ಸಂಬಂಧಿಯಾದ ಆಚಾರಗಳೆಲ್ಲಾ; ಸದಾಚಾರವಾಗಿರುತ್ತದೆ. ಈ ಸದಾಚಾರವನ್ನು ಸಾಧಕನು ತನ್ನ 'ಸಾಕಾರ ಲಿಂಗತತ್ತ್ವ' ಪೂಜೆಯ ವೇಳೆಯಲ್ಲಿ ಅಂದರೆ ಲಿಂಗದಲನುದಿನ ವೇಳೆಯಲ್ಲಿ, "ಅಂದರೆ, ಇಷ್ಟಲಿಂಗ ಸ್ವರೂಪದ' ತನ್ನ ಚಿತ್ಕಳೆಯನ್ನು ಮತ್ತು ಪ್ರಾಣದಲ್ಲಿ ಶಕ್ತಿ ವಿಶಿಷ್ಟ ಚೈತನ್ಯಾತ್ಮಕ ಪ್ರಜ್ಞೆಯನ್ನು ಪೂಜಿಸಿಕೊಳ್ಳುವ; ಅನುದಿನದ ವೇಳೆಯಲ್ಲಿ ಸಾಧಕನು 'ಜಂಗಮ'ದಲ್ಲಿ ಅನುಭಾವ ಮಾಡಿಕೊಳ್ಳಬೇಕು. ಇಲ್ಲಿ 'ಜಂಗಮ' ತತ್ತ್ವ ಸ್ವರೂಪವೇ ಸಾಧಕನಲ್ಲಿನ ಪ್ರಾಣದಲ್ಲಿನ ಶಕ್ತಿ ವಿಶಿಷ್ಟವಾದ ಚೈತನ್ಯದ ಅರಿವಾಗಿದೆ. (ಇಲ್ಲಾ ಪ್ರಜ್ಞೆಯಾಗಿದೆ) ಈ ಜಂಗಮದಲ್ಲಿನ ಅನುಭಾವ 'ಸಮಯಾಚಾರ'ವಾಗಿದೆ. ಅಂದರೆ, ಇಷ್ಟಲಿಂಗದ ಅಷ್ಟವಿದ್ಯಾರ್ಚನೆ, ಷೋಡಶೋಪಚಾರಗಳಿಂದ ಕೂಡಿದ ಪೂಜೆಗಳನ್ನು ಮಾಡಿಕೊಂಡು; ಲಿಂಗ ನಿರೀಕ್ಷೆ, ದೃಷ್ಟಿ ಯೋಗದ 'ಮೂಲಕ' ಅಂದರೆ 'ತ್ರಾಟಕ ಯೋಗ'ದ ಮೂಲಕ ಸಾಧಕನು ತನ್ನ ಬಹಿರಂಗವಾಗಿರುವ ಮನವನ್ನು ಅಂತರ್ಮುಖಿಗೊಳಿಸಿಕೊಂಡು ತನ್ನ 'ಮನದಲ್ಲಿನ ಅರಿವನ್ನು ಪ್ರಾಣದಲ್ಲಿನ ಅರಿವಿನ' ಜೊತೆಯಲ್ಲಿ 'ಯೋಗ' ಮಾಡಿದಾಗ ಅದು ಸಮಯಾಚಾರದ 'ಜಂಗಮದಲನುಭಾವ'ವಾಗುತ್ತದೆ. ಇದನ್ನು 'ಈಶ್ವರಾರಾಧನೆ', ಅಥವಾ 'ಜಂಗಮಾರ್ಚನೆಯ ಮಾಟ'ವೆಂದೂ ಸಹ ಕರೆಯಲಾಗಿದೆ. ಈ ಜಂಗಮದಲನುಭಾವ ಸಾಧ್ಯವಾಗಬೇಕಾದರೆ, ಸಾಧಕನ ಮನವು (1) ನಿಸ್ವಾರ್ಥವಾಗಿದ್ದು, (2) ವಿರಹಂಭಾವ ಸ್ಥಿತಿಯಲ್ಲಿದ್ದು (3) ಕಾಮ ವಿನಿರ್ಮುಕ್ತ ಸ್ಥಿತಿಯಲ್ಲಿದ್ದು (4) ಶುದ್ಧವಾಗಿದ್ದರೆ (ಶುದ್ಧಾಂತಃಕರಣವಾಗಿದ್ದರೆ) ಮಾತ್ರ, ಇಂತಹ ಗುಣಗಳನ್ನೇ ಹೊಂದಿರುವ ಪ್ರಾಣದ ಜೊತೆಯಲ್ಲಿ ಸೇರಲು ಸಾಧ್ಯ. ಅಂದರೆ ಜಂಗಮಾರಾಧನೆ ಯಶಸ್ವಿಯಾಗಲು ಮನವೊ ಸಹ ಈ ಗುಣಗಳನ್ನು ಹೊಂದಿದಾಗ ಮಾತ್ರ ಸಾಧ್ಯವಾಗುತ್ತದೆ. ಮನವು (ಸಾಧಕನ) ಈ ಗುಣಗಳನ್ನು ಹೊಂದಬೇಕಾದರೆ ಅವನು "ಸತ್ಯ ಶುದ್ಧ ಕಾಯಕ ದಾಸೋಹ"ಗಳನ್ನು ಆಚರಿಸಬೇಕು. ಇದನ್ನು ಸಾಧಕನು ಆಚರಿಸಿ ವ್ಯಕ್ತಿಗತವಾದ ಮೇಲಿನ ಗುಣಧರ್ಮಗಳನ್ನು ಬೆಳೆಸಿಕೊಂಡರೆ, ಮಾತ್ರ ತನ್ನ ಜಂಗಮಾರಾಧನೆಯಲ್ಲಿ ಯಶಸ್ವಿಯಾಗಲು ಸಾಧ್ಯವಾಗುತ್ತದೆ. ಜಂಗಮಾರಾಧನೆಯಲ್ಲಿ ಯಶಸ್ವಿಯಾದರೆ, ಸಾಧಕನಿಗೆ ಈಶ್ವರನ ಅನುಗ್ರಹವಾಗಿ. (36 ತತ್ತ್ವಗಳ ಪ್ರಕಾರ) ಅವನಿಗೆ ಮುಂದೆ ತನ್ನಲ್ಲೆ (ದೇಹದಲ್ಲೇ) ಇರುವ ಸದಾಶಿವ ತತ್ತ್ವದ ಪರಿಚಯವಾಗಿ, 'ಶಕ್ತಿ' ಹಾಗೂ 'ಶಿವ ತತ್ತ್ವ'ವಾಗುತ್ತಾನೆ. ಇದೇ ಸಾಕಾರ ಲಿಂಗತತ್ತ್ವ ಸ್ವರೂಪ ಸ್ಥಿತಿಯಾಗಿದೆ. ಒಂದು ಸಮಸಾಧಕನು (ಅವನ ಮನವು) ಸಾಕಾರ ಲಿಂಗತತ್ತ್ವ ಸ್ವರೂಪವನ್ನು ಪಡೆದರೆ, ಮುಂದೆ ತನ್ನಿಂದ

ತಾನೇ ನಿರಾಕಾರ ಲಿಂಗತತ್ತ್ವ ಸ್ವರೂಪವಾದ 'ಪರಶಿವ' ಸ್ಥಿತಿಯು ಉಂಟಾಗುತ್ತದೆ ಕಾರಣ ಸಾಧಕನ ದೇಹದಲ್ಲೇ ತನ್ನಿಂದ ತಾನೇ ಆಚರಣೆಗೆ ಬರುವ ಏಳು ನಿವೃತ್ತಿ ಶಕ್ತಿಗಳ ಅಸ್ಥಿತ್ವವಾಗಿದೆ. (ಒಂದು ಬೋಧಿನ, ವ್ಯಾಪಿಕ, ನಾದ, ನಾದಾಂತ, (ಮಹಾಸಾರ) ಸಮನಿ, ಉನ್ಮನಿ), ಇವು ಸಾಧಕನ ಆಜ್ಞಾ ಚಕ್ರದಿಂದ ಸಾಧಕನ ಸಹಸ್ರಾರ ಚಕ್ರದವರೆಗಿನ ತನ್ನಿಂದ ತಾನೇ ಆಚರಣೆಗೆ ಬರುತ್ತದೆ. ಈ ಪ್ರಕ್ರಿಯೆಗಳಿದ ಸಾಧಕನು ಕೊನೆಯಲ್ಲಿ ಅಖಂಡ ಚೈತನ್ಯ ಸ್ವರೂಪದ ಪ್ರಜ್ಞೆಯೇ ಆಗುತ್ತಾನೆ. ಇದೇ ಸಾಧಕನ ದೇಹದಲ್ಲೇ ಇರುವ ಅಣು ಚಕ್ರದಲ್ಲಿನ ಅನುಭಾವವಾಗುತ್ತದೆ. ಈ ವಿಚಾರಗಳನ್ನು ಶಾಸ್ತ್ರ ಸ್ವರೂಪದಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವು; 93, 94, 95 ಸ್ಥಲಗಳಲ್ಲಿ (ಆಜ್ಞಾ ಚಕ್ರದ ಅನುಭಾವ'ವಾಗಿ) 96, 97, 98, ಸ್ಥಲಗಳಲ್ಲಿ (ಸಹಸ್ರಾರ ಚಕ್ರದ ಅನುಭಾವವಾಗಿ); 99 ಸ್ಥಲ, (ಶಿಖಾಚಕ್ರ) 100 ಸ್ಥಲ (ಪಶ್ಚಿಮ ಚಕ್ರ) 101 ಸ್ಥಲ (ಅಕಾಲ ಚಕ್ರ) ಅನುಭಾವವಾಗಿ, ಶ್ಲೋಕ ಸ್ವರೂಪ ಪ್ರಮೇಯಗಳಲ್ಲಿ ಪ್ರತಿಪಾದಿಸಿದೆ. ಇದೊಂದು ಅದ್ಭುತವಾದ ವಿವರಣೆಯಾಗಿದೆ. ಬಸವಾದಿ ಶರಣರ ಅನೇಕ ವಚನಗಳು ಈ ಶಾಸ್ತ್ರ ಸ್ವರೂಪದ ಮಾಹಿತಿಗಳನ್ನು ಅನುಭಾವ ಸ್ವರೂಪದ ಮಾಹಿತಿಗಳನ್ನಾಗಿ ಪ್ರತಿಪಾದಿಸಿ; ಶಾಸ್ತ್ರ ಹಾಗೂ ಅನುಭಾವಗಳಲ್ಲಿನ "ಸಾಮ್ಯತೆ"ಯನ್ನು ಗ್ರಹಿಕೆಗೆ ತಂದು ಕೊಡುತ್ತದೆ. ಈ ವಿಚಾಉಗಳ ವಿವರಣೆಗಳನ್ನು ಉಂದೆ ಚರ್ಚೆಗೆ ಒಳಪಡಿಸಲಾಗುವುದು. ಈ ಸಾಧಕನಲ್ಲಿನ ಅಣು ಚಕ್ರದಲ್ಲಿನ ಲಿಂಗತತ್ತ್ವದ ಸ್ವರೂಪದ ಅನುಭಾವವೇ 'ನಿಜ' ಸ್ಥಿತಿಯಾಗಿದ್ದು 'ಲಿಂಗೈಕ್ಯ ಸ್ಥಿತಿಯಾಗಿದೆ. ಆದ್ದರಿಂದ ಇಷ್ಟಲಿಂಗೋಪಾಸನೆಯ ಮೂಲದ; ಷಟ್‌ಸ್ಥಲ ಸಿದ್ಧಾಂತದ ಆಚರಣೆ ಸಾಧಕನಿಗೆ ಈ 'ನಿಜ' 'ಸ್ಥಿತಿಯ' ಲಿಂಗೈಕ್ಯ – ಸ್ಥಿತಿಯನ್ನು ತಂದು ಕೊಡುತ್ತದೆ. ಈ ಸ್ಥಿತಿಯ ನಿಲುವನ್ನು ಬಸವಣ್ಣನವರು ತಮ್ಮ ವಚನ (2) ರಲ್ಲಿ (ಅಂತರಂಗದೊಳಗಿರ್ದನಿರವಯ ಲಿಂಗವನು ಸಾವಯ ಲಿಂಗಮ ಮಾಡಿ) "ಆ ಮೂಲ ಚೈತನ್ಯವೇ ಭಾವಲಿಂಗವು, ಇದನರಿದು ನೋಡುವ ನೋಟ ಭಾವ ಪೂರ್ಣವಾಗಿ, ತಾನು ತಾನಾದಲ್ಲದೆ ಇದಿರಿಟ್ಟಾ ತೋರುವುದಿಲ್ಲವಾಗಿ, ಅಖಂಡ ಪರಿಪೂರ್ಣವಪ್ಪ 'ನಿಜ'ವು 'ತಾನೇ ಕೊಡಲ ಸಂಗಮ ದೇವಾ' ಎಂದು ಪ್ರತಿಪಾದಿಸಿದ್ದಾರೆ. ಈಗ ಇಲ್ಲಿ ಮತ್ತೊಂದು ಬಸವಣ್ಣನವರ ಲಿಂಗತತ್ತ್ವದ ಹಿನ್ನೆಲೆಯ ಲಿಂಗತತ್ತ್ವ ಸಾಧನೆಯನ್ನು ಪ್ರತಿಪಾದಿಸುವ ವಚನವನ್ನು ವಿಶ್ಲೇಷಣೆಗಳಿಗೆ ತಂದುಕೊಳ್ಳಬಹುದಾಗಿದೆ.

ಪುಟ 73

ವಚನ (6) (ಸಪ್ತ ಸೂತ್ರಗಳು) 6 ಲಿಂಗತತ್ತ್ವದ ಹಿನ್ನೆಲೆಯಲ್ಲಿ ಲಿಂಗತತ್ತ್ವದ ಸಾಧನೆ."

| | |
|---|---|
| 1. ಲಿಂಗವ ನೆನೆದಡೆ | ಸುಪ್ರಭಾತ ಸಮಯದಲ್ಲಿ ಅರ್ತಿಯಲ್ಲಿ ಲಿಂಗವ ನೆನೆದಡೆ" |
| 2. ದೇವಪೂಜೆ | ತಪ್ಪೊದು ಅಪಮೃತ್ಯು, ಕಾಂಕರ್ಮಂಗಳಯ್ಯಾ, 'ದೇವಪೂಜೆಯ ಮಾಡಿ, 'ದುರಿತಬಂಧನದೋಟ. |
| 3. ಇಷ್ಟ ಲಿಂಗದ ನೋಟ ಕಣ್ಣೋಟ | 'ಶಂಭು ನಿಮ್ಮ ನೋಟ, ಹಿಂಗದ ಕಣ್ಣೋಟ' |
| 4. ಆಧ್ಯಾತ್ಮ | ಸದಾ ಸನ್ನಿತನಾಗಿ 'ಶರಣೆಂದು ನಂಬೂದು" |
| 5. ಜಂಗಮಾರ್ಚನೆ ಕೂಡಲಸಂಗಮನ | ಜಂಗಮಾರ್ಚನೆಯ ಆಟ, "ಕೂಡಲ ಸಂಗನ ಕೂಟ".<br><br>– ಬಸವಣ್ಣನವರು. ವಚನ:177<br>ಪುಟ:45, ಸ.ವ.ಸಂ.1, |

| | ಸ.ಸರ್ಕಾರ 1993. |
|---|---|

ಅದ್ಭುತವಾದ ನಿರೂಪಣೆ. ಈ ವಚನದ ಸಂಪೂರ್ಣ ವಿವರಣೆ ಷಟ್‌ಸ್ಥಲ ಸಿದ್ಧಾಂತದ ಪೂರ್ಣ ವಿವರಣೆ ತಿಳೀದಿದ್ದರೆ ಮಾತ್ರ ಸಾಧ್ಯವಾಗುತ್ತದೆ. ದೈವಾನುಗ್ರಹದಿಂದ ಇವತ್ತಿಗೆ ವೀರಶೈವ ಸಮಾಜದಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿ ಷಟ್‌ಸ್ಥಲ ಸಿದ್ಧಾಂತ ಪ್ರತಿಪಾದನೆ ಮಾಡುವ ಗ್ರಂಥ ದೊರಕುತ್ತದೆ. ಈ ಗ್ರಂಥದಲ್ಲಿನ 101 ಸ್ಥಲದ ಪ್ರತಿಪಾದನೆಯನ್ನು ನವವರ್ಗದ ಸಮಗ್ರ ಸಮಸಮುಚ್ಚಯ ಕ್ರಮದಲ್ಲಿ ತಿಳಿಯುವ ಕ್ರಮ ಈ ಪ್ರಬಂಧದ ಮೂಲಕ ದೊರೆಯುತ್ತಿದೆ. ಹೀಗಾಗಿ ಬಸವಣ್ಣನವರ ಈ ವಚನವನ್ನು ಅತ್ಯಂತ ಸಮರ್ಥವಾಗಿ, ಪ್ರಯೋಜನಕಾರಿಯಾಗಿ ಸಾಧನೆಗೆ ಅಳವಡಿಸಬಹುದಾದ ನೆಲೆಯಲ್ಲಿ ವ್ಯಾಖ್ಯಾನ ಮಾಡಬಹುದಾಗಿದೆ. ಈ ವಚನದಲಿ ಇಷ್ಟ ಲಿಂಗದ ಪೂಜೆ, ಅನುಷ್ಠಾನ, ಮುಂತಾದ ಪ್ರಕ್ರಿಯೆಗಳ ಮೂಲಕ ಹೇಗೆ ಒಬ್ಬ ಸಾಧಕನು ತನ್ನ 'ಲಿಂಗೈಕ್ಯ' ಸ್ಥಿತಿಯನ್ನು ಪಡೆದು (ಹೇಗೆ) ಕೂಡಲ ಸಂಗನ ಕೂಟವನ್ನು ಸಾಧಿಸಬೇಕೆಂಬ ವಿಚಾರಗಳಿವೆ. ಈ ವಚನವನ್ನು ಸಪ್ತಸೂತ್ರಗಳಾಗಿ ವಿಂಗಡಿಸಿ, ವಿಮರ್ಶೆಗೆ ಒಳಪಡಿಸಬಹುದಾಗಿದೆ ಈ ವಚನದಲ್ಲಿ ಮೊದಲನೆಯ ಸೂತ್ರ, ಲಿಂಗವ ನೆನೆದಡೆ, ಅದೂ ಸಹ ಪ್ರಭಾತ ಸಮಯದಲ್ಲಾಗಿದೆ. (ಸೂತ್ರ 1) "ಸುಪ್ರಭಾತ ಸಮಯದಲ್ಲಿ ಅರ್ತಿಯಲ್ಲಿ ಲಿಂಗವ ನೆನೆದಡೆ" ಸುಪ್ರಭಾತವೆಂದರೆ ಸಂಧಿಕಾಲ; ಅಂದರೆ ರಾತ್ರಿ ಹಗಲಾಗುವ ಸಮಯ. ಇದೇ ರೀತಿಯಲ್ಲಿ ಮಧ್ಯಾನ್ಹವೂ ಸಂಧಿಕಾಲ ಅಂದರೆ ಹಗಲಿನ ಮಧ್ಯಾನ್ಹ 12 ಘಂಟೆಗೆ ಸಮಯ ಬದಲಾಗುವ ಕಾಲ, ಮತ್ತೊಂದು ಸಂಧ್ಯಾ ಕಾಲ ಅಂದರೆ, ಹಗಲು ರಾತ್ರಿಯಾಗುವ ಸಾಯಃಕಾಲ. ಈ ಮೂರು ವೇಳೆಗಳು ದಿನದಲ್ಲಿ 'ಶಿವನ ಆರಾಧನೆಗೆ' ಪ್ರಶಸ್ತ್ಯವಾದ ಕಾಲವೆಂದು ಅನುಚಾವವಾಗಿ ಸಂಪ್ರದಾಯದಲ್ಲಿ ಈ ದೇಶದಲ್ಲಿ ಆಚರಣೆಯಲ್ಲಿದೆ. ಎಲ್ಲ ಭಕ್ತರೂ ಅವರವರ ಇಷ್ಟದೇವತಾ ಪೂಜಾ ಕೈಂಕರ್ಯವನ್ನು ಈ ಮೂರು ಸಂಧಿ ಕಾಲದಲ್ಲಿ ಎಲ್ಲಾ ತ್ರಿಕಾಲ ಅಥವಾ ದ್ವಿಕಾಲ, ಅಥವ ಏಕಕಾಲದಲ್ಲಿ ಮಾಡುವ ಪರಿಪಾಠಗಳಿವೆ. ಇಲ್ಲಿ ಲಿಂಗಪೂಜೆಯನ್ನು ಸುಪ್ರಭಾತ ಸಮಯದಲ್ಲಿ ಮಾಡಿಕೊಳ್ಳುವ ವಿಚಾರ ಪ್ರತಿಪಾದನೆಯಿದೆ. ಸುಪ್ರಭಾತ ಸಮಯದಲ್ಲಿ ಪ್ರೀತಿಯಿದ (ಅರ್ತಿಯಲ್ಲಿ) 'ಲಿಂಗ'ವನ್ನು ನೆನೆಯಬೇಕಿದೆ ಲಿಂಗಾರ್ಚನೆಗೆ ತೊಡಗಿ ಕೊಳ್ಳುವ ಮೊದಲು ಲಿಂಗವನ್ನು ನೆನೆಯಬೇಕು. ಅದೂ ಪ್ರೀತಿಯಿಂದ. ಇಲ್ಲಿ 'ಲಿಂಗ'ವೆಂದರೆ ಇಷ್ಟಲಿಂಗವೆಂದು ತಿಳಿಯಬಹುದು ಇಲ್ಲವೇ ಆ ಇಷ್ಟಲಿಂಗ ಪ್ರತಿಪಾದನೆ ಮೊಡು 'ಲಿಂಗತತ್ತ್ವ'ವೆಂದು ತಿಳಿಯಬಹುದು. ಈ ಲಿಂಗತತ್ತ್ವವು ಸಾಧಕನ ದೇಹದಲ್ಲೇ ಅಸ್ಥಿತ್ವದಲ್ಲಿದೆ. ಅದೂ ಅಲ್ಲದೆ, ಅಂತಹ ತಿಳುವಳಿಕೆಯುಳ್ಳ ದೇಹವೇ 'ಲಿಂಗ'ವಾಗಿದೆ. ಇಷ್ಟಲಿಂಗವನ್ನು ನೆನೆಯುವುದು ಇಲ್ಲವೇ ಅದು ಪ್ರತಿಪಾದಿಸುವ 'ಲಿಂಗತತ್ತ್ವ'ವನ್ನು ನೆನೆಯುವುದು. ಎರಡು ಒಂದೇ ಆಗಿದೆ. ಈ 'ಲಿಂಗತತ್ತ್ವ'ದ ವಿವರಣೆಗಳು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ 1) 'ಲಿಂಗಧಾರಣ ಸ್ಥಲ' (5ನೆ ಸ್ಥಲ) 2) 'ಪಂಚಾಕ್ಷರ ಜಪ ಸ್ಥಪ ಸ್ಥಲ (8ನೆಯ ಸ್ಥಲ) ಹಾಗೂ 'ಲಿಂಗ ಮಹಾತ್ಮೆ'ಯ ಸ್ಥಲ (27ನೆಯ ಸ್ಥಲ) ಗಳಲ್ಲಿ ವಿವರವಾಗಿ ಶಾಸ್ತ್ರ ಸ್ವರೂಪದಲ್ಲಿ ವಿವರಿಸಲಾಗಿದೆ. ಈ ಎಲ್ಲಾ ವಿಚಾರಗಳನ್ನು ಸಾಧಕನು ತನ್ನ ದೇಹದಲ್ಲಿನ 'ದಶ–ಚಕ್ರ'ಗಳಿಗೆ ಅನ್ವಯಮಾಡಿಕೊಂಡು ಮನನ ಮಾಡಬೇಕು. ಈ ಲಿಂಗತತ್ತ್ವದ ವಿಚಾರಗಳನ್ನು 4) 'ತ್ರಿಪಥ ಸಂಪತ್ತಿ' ಸ್ಥಿತಿ (11ನೆಯ ಸ್ಥಲ) ಉಭಯ ಸ್ಥಿತಿ (10ನೆಯ ಸ್ಥಲ)ಗಳಲ್ಲೂ ಸಹ ಪ್ರತಿಪಾದಿತವಾಗಿದೆ. ಅಂದರೆ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಒಟ್ಟು 6ನೆ ಪರಿಚ್ಛೇದ, ಎಂಟನೆಯ ಪರಿಚ್ಛೇದ, ಹತ್ತನೆಯ ಪರಿಚ್ಛೇದ, ಹಾಗೂ ಒಂಭತ್ತನೆಯ ಪರಿಚ್ಛೇದಗಳಲ್ಲಿ ಒಟ್ಟು (42+49+10+7+9)=117 ಶ್ಲೋಕಗಳಿದ್ದು ಲಿಂಗತತ್ತ್ವ ವಿಚಾರಗಳನ್ನು ಸರ್ವಾಂಗೀಣವಾಗಿ ಪ್ರತಿಪಾದಿಸಿದೆ. ಇವುಗಳಲ್ಲಿ ಉದಾಹರಣೆಗೆ ಕೆಲವು ವಿಚಾರಗಳನ್ನು ಇಲ್ಲಿ ಪ್ರತಿಪಾದಿಸಲಾಗಿದೆ. "ಸ್ಫಟಿಕ, ಶ್ರೀಶೈಲ ಪರ್ವತ ಶಿಲೆ, ಚಂದ್ರಕಾಂತ ಶಿಲೆ, ಸೂರ್ಯಕಾಂತ ಶಿಲೆ ಮತ್ತು ನರ್ಮದಾ ಬಾಣಲಿಂಗ ಇವುಗಳಲ್ಲಿ ಯಾವುದಾದರೊಂದು ಶಿಲೆಯಿಂದ ನಿರ್ಮಿತವಾದ ಲಿಂಗವನ್ನು

(ದೀಕ್ಷೆಗಾಗಿ) ತೆಗೆದುಕೊಳ್ಳಬೇಕು (6–22) ಸರ್ವ ಲಕ್ಷಣಗಳಿಂದ ಕೂಡಿದ, ಶಾಸ್ತ್ರ ವಿಧಿಯಿಂದ ಪರಿಶುದ್ಧಗೊಳಿಸಿ, ಹಸ್ತ ಪೀಠದಲ್ಲಿರಿಸಿ ಅಭಿಷೇಕವನ್ನು ಮಾಡಿದ ಮತ್ತು ಗಂಧ ಪುಷ್ಪಾದಿಗಳಿಂದ ಪೂಜಿಸಲ್ಪಟ್ಟ ಮಂತ್ರದಿಂದ ಸಂಸ್ಕರಿಸಿ ಆ ಲಿಂಗದಲ್ಲಿ ಶ್ರೀ ಗುರುವು ವಿದ್ಯಕ್ತವಾಗಿ ಶಿವಕಲೆಯನ್ನು (ಆ ಶಿಷ್ಯನ ಚಿತ್ಕಳೆಯನ್ನು) ಸಂಯೋಜಿಸಬೇಕು. (ಹಸ್ತ ಮಸ್ತಕ ಸಂಯೋಗದಿಂದ) ಆ ಲಿಂಗದಲ್ಲಿಯೇ ಶಿಷ್ಯನ ಪ್ರಾಣವನ್ನೂ ಸಹ ತೆಗೆದುಕೊಂಡು ಪ್ರತಿಷ್ಠಿಸಬೇಕು. ಸಿ.ಶಿ. (6–23,24) ಅದರಂತೆ ಆ ಶಿಷ್ಯನ ಪ್ರಾಣದಲ್ಲಿ ಆ ಲಿಂಗವನ್ನು ಏಕಭಾವದಿಂದ (ತಾದಾತ್ಮ್ಯ ಭಾವದಿಂದ) ಸ್ಥಾಪಿಸಬೇಕು. ಹೀಗೆ ಮಾಡಿ ಶ್ರೀ ಗುರುವು ಶಿಷ್ಯನ ಹಸ್ತದಲ್ಲಿ ಆ ಲಿಂಗವನ್ನು ಕೊಡಬೇಕು. ಸಿ.ಶಿ. (6–25) (ಹೇ ಶಿಷ್ಯನೇ) ಇದು ನಿನ್ನ ಪ್ರಾಣಲಿಂಗವು. ಇದನ್ನು ನೀನು ದೇಹದಿಂದ ಅಗಲಿಸಬೇಡ. ಸಿ.ಶಿ. (6–26). ಇಷ್ಟ ಲಿಂಗವನ್ನು ಧರಿಸಿರುವುದರಿಂದ ಪುಣ್ಯದ ಪ್ರಾಪ್ತಿಯಾಗುವುದು ಮತ್ತು ಎಲ್ಲಾ ಪಾಪಗಳು ನಾಶಹೊಂದುವುವು. (ಅಂತೆಯೆ) ಶಿವಾಗಮಗಳ ಅರ್ಥವನ್ನು ತಿಳಿದ ವಿಚಾರದರಾದ (ನಿಪುಣರಾದ) ಎಲ್ಲ ಮುನಿಗಳು ಇದನ್ನು ಅಂಗೀಕರಿಸಿದ್ದಾರೆ. ಸರ್ವಪುರುಷಾರ್ಥ ಸಾಧಕರಾದ ಮೋಕ್ಷಾಕಾಂಕ್ಷಿಗಳಾದ ಮುನಿಗಳಿಂದ ಈ ಲಿಂಗಧಾರಣೆಯು ಬಾಹ್ಯ ಮತ್ತು 'ಅಭ್ಯಂತರ (ಬಹಿರಂಗ ಮತ್ತು ಅಂತರಂಗ)ವೆಂಬುದಾಗಿ ಎರಡು ಪ್ರಕಾರ ಹೇಳಲ್ಪಟ್ಟಿದೆ. ಸಿ.ಶಿ.(6–30). ಸರ್ವಕ್ಕೂ ಕಾರಣೀಭೂತವಾದ ಶಿವ ಸಂಬಂಧವಾದ ಯಾವ ಚಿದ್ರೂಪವಾದ (ಅರಿವಿನ ಸ್ವರೂಪದ) ಆ ಪರಮಲಿಂಗವನ್ನು ಚಿತ್ತದಲ್ಲಿ ಧರಿಸಿಕೊಳ್ಳುವುದೇ ಅಂತರ ಲಿಂಗಧಾರಣವೆಂದು ಹೇಳಲಾಗಿದೆ. ಸಿಶಿ (6–31) ವಿಶ್ವಕ್ಕೆ ಕಾರಣೀ ಭೂತವಾದ 'ಶಿವ'ನೆಂದು ಕರೆಸಿಕೊಳ್ಳುವ ಚಿದ್ರೂಪ (ಅರಿವು)ವಾದ ಆ 'ಪರತತ್ತ್ವ'ವು ವಿಶ್ವದ ಕಾಲುಷ್ಯಕ್ಕೆ ಅಂಟಿಕೊಳ್ಳದ, ನಿರ್ವಿಕಲ್ಪವಾದ' ನಿಷ್ಕಲ ತತ್ತ್ವ'ವಾಗಿದೆ. ಸಿ.ಶಿ. (6–32) ಆ 'ಪರತತ್ತ್ವ'ವು ಸತ್ತಾನಂದಗಳ ಪರಿಸ್ಫೂರ್ತಿ (ಸತ್, ಚಿಲ್, ಆನಂದ)ಯೆಂಬ ಸಮುಲ್ಲಾಸ ರೂಪವಾದ 'ಕಲಾಶಕ್ತಿ'ಯಿಂದ ಯುಕ್ತವಾಗಿದೆ. ಅದು ಪ್ರಮಾಣಗಳಿಗೆ ಅಗಮ್ಯವೂ ಅನಿರ್ದೇಶ್ಯವೂ ಆಗಿದೆ. ಆದರೂ ಮುಮುಕ್ಷುಗಳಿಂದ ಉಪಾಸಿಸಲು ಅರ್ಹವಾದುದಾಗಿದೆ. ಸಿ.ರೆ. (6–33, ಪ್ರಪಂಚಕ್ಕೆ ಅತೀತವಾದ, ಅವ್ಯಯವಾದ (ಅವಿನಾಶಿಯಾದ) ಪರಬ್ರಹ್ಮವೆಂದು ಕರೆಯಲ್ಪಡುವ ಆ ಮಹಾಲಿಂಗವು ಸರ್ವ ಜೀವಿಗಳ ಅಂತರಂಗದ ಮೂರು ಸ್ಥಾನಗಳಲ್ಲಿ ಅದೇ ಗೋಚರಿಸುತ್ತದೆ. ಸಿ.ಶಿ. (6–34) ಶಿವಾಗಮಗಳಲ್ಲಿ ಬ್ರಹ್ಮವೆಂದು ಕರೆಯಿಸಿಕೊಳ್ಳುವ ಆ ಜ್ಯೋತಿರ್ಲಿಂಗವು ಸರ್ವ ಜೀವಿಗಳ ಮೂಲಾಧಾರ (ಆಧ್ಯಾ ಚಕ್ರ) ಹೃದಯ (ಅನಾಹುತ ಚಕ್ರ) ಮತ್ತು ಭ್ರೂಮಧ್ಯ (ಆಜ್ಞಾ ಚಕ್ರ ಗಳಲ್ಲಿ ಯಾವಾಗಲೂ ಪ್ರಕಾಶಿಸುತ್ತದೆ. ಸಿ.ಶಿ. (6–35)" ಇದೇ ವಿಚಾರದ ಪ್ರತಿಪಾದನೆಗಳನ್ನು ಈ ಪ್ರಬಂಧದ 'ದಶ–ಚಕ್ರ'ಗಳ ವಿಭಾಗದಲ್ಲಿ ಚಕ್ರ ಸ್ವರೂಪಗಳ ವಿಚಾರದಲ್ಲಿ ಪ್ರತಿಪಾದನೆಯಾಗಿದೆ." ಅಪರಿಚ್ಛಿನ್ನ (ಅಖಂಡ)ವಾದ ಅವ್ಯಕ್ತವಾದ, ಸನಾತನವಾದ, (ಯಾವಾಗಲೂ ಇರುವ) ಪರಬ್ರಹ್ಮ ಸ್ವರೂಪವಾದ ಅಂತಸ್ಥವಾದ ಆ ಲಿಂಗವು ತನ್ನ ಮಾಯಾಶಕ್ತಿಯಿಂದ ಉಪಾಸನೆಗೋಸ್ಕರ ಪರಿಚ್ಛಿನ್ನವಾಯಿತು. (ಖಂಡಿತವಾಯಿತ್ತು; ಇದು ಸರ್ವಾತ್ಮ ಭಾವವಾಗಿದೆ.) ಸಿ.ಶಿ. (6–36) ಚರಾಚರಾತ್ಮಕವಾದ ಈ ಜಗತ್ತು ಎಲ್ಲ ಪುನ: ಪುನ: ಉತ್ಪತ್ತಿಯಾಗುವುದೋ ಮತ್ತು ಲಯವಾಗುವುದೋ ಅ ಶಾಶ್ವತವಾದ ಬ್ರಹ್ಮವೇ 'ಲಿಂಗ'ವೆಂದು ಕರೆಯಿಸಿಕೊಳ್ಳುವುದು. ಸಿ.ಶಿ. (6–37) ಆದ್ದರಿಂದ ಸಚ್ಚಿದಾನಂದ ಸ್ವರೂಪವಾದ ಆ ಪರಮತತ್ತ್ವವು 'ಲಿಂಗ'ವೆಂಬುದಾಗಿ ಖ್ಯಾತಿಯನ್ನು ಪಡೆಯಿತು. ಇದು ವಿಶ್ವಕ್ಕಿಂತಲೂ ಬೃಹದಾಕಾರವಾಗಿರುವುದರಿಂದ ಮತ್ತು ವಿಶ್ವಕ್ಕೆ ಮಹಾ ಪೋಷಕವಾಗಿರುವುದರಿಂದ, ಇದು ಬ್ರಹ್ಮ ಶಬ್ಧಕ್ಕೆ ಅಭಿದೇಯವಾಗಿರುತ್ತದೆ. (ಇದನ್ನು ಬ್ರಹ್ಮವೆಂದು ಕರೆಯಲಗಿದೆ.) ಸಿ.ಶಿ. (6–38) ಯಾರು ತನ್ನ ಹೃದಯದಲ್ಲಿ ಚಿದ್ರೂಪವಾದ "ಈಶ್ವರ" ಸಂಬಂಧಿಯಾದ ಲಿಂಗವನ್ನು ಧರಿಸುತ್ತಾರೆಯೋ ಅವರಿಗೆ ಈ ಘೋರ ಸಂಸಾರ ಮಂಡಲದಲ್ಲಿ ಪುನರಾವೃತ್ತಿಯು (ಪುನರ್ಜನ್ಮವು) ಇರುವುದಿಲ್ಲ (6–42_ ಜ್ಯೋತಿರ್ಲಿಂಗವನ್ನು (ಅಂತರಲಿಂಗ ಧಾರಣೆಯನ್ನು) ಅಂತರಂಗದಲ್ಲಿ ಧರಿಸಲು ಶಕ್ತನಾಗಲಿ ಅಥವಾ

ಅಶಕ್ತನೇ ಆಗಿರಲಿ ಅವನು ಬಾಹ್ಯ ಲಿಂಗವನ್ನು ಆ ಜ್ಯೋತಿರ್ಲಿಂಗದ ಸ್ವರೂಪವೆಂತಲೇ ನಿಶ್ಚಯಿಸಿ ಧರಿಸಬೇಕು. ಸಿ.ಶ (6–48) ಈ ಲಿಂಗವು ಸ್ಥಲ, ಸೂಕ್ಷ್ಮ ಮತ್ತು ಪುರಾತ್ವದ (ಕಾರಣ) ಎಂಬುದಾಗಿ ಮೂರು ಪ್ರಕಾರವಾಗಿ ಹೇಳಲ್ಪಟ್ಟಿದೆ. ಯಾವುದು ಬಾಹ್ಯತನುವಿನಲ್ಲಿ ಧರಿಸಲ್ಪಟ್ಟಿದೆಯೋ ಆ ಸ್ಥೂಲವಾದ ಲಿಂಗವು 'ಇಷ್ಟಲಿಂಗ'ವಾಗಿದೆ. (6–49) ಸೂಕ್ಷವಾದ ಲಿಂಗವೇ 'ಪ್ರಾಣಲಿಂಗ'ವು, ಯಾವುದು ಅಂತರಂಗದಲ್ಲಿ ಭಾವಮಯವಾಗಿದೆಯೋ ಅದು "ಪರಾತ್ಪರ ಲಿಂಗ", ಅದುವೇ 'ತೃಪ್ತಿಲಿಂಗ'ವೆಂದು

ಟಿಪ್ಪಣಿ: **(Important Concept)**

ಈ 'ಬ್ರಹ್ಮ' ಸ್ವರೂಪವೇ 'ಲಿಂಗತತ್ತ್ವ'ವಾಗಿದೆ. ಅಥವಾ 'ಲಿಂಗ'ವಾಗಿದೆ. ಇದು ಸತ್, ಚಿತ್, ಆನಂದ ಸ್ವರೂಪವಾಗಿದೆ. 'ಸತ್ ಅಂದರೆ 'ಪರವಸ್ತು'ವಾಗಿದೆ. ವಸ್ತುವನ್ನು ಒಂದು ರೀತಿಯ **Matter** ಎಂದು ತಿಳೀಯಬಹುದಾಗಿದೆ. **Matter** ಅಥವಾ **Mass** ಎಂಬುದೇ "ಚೈತನ್ಯ ಸ್ವರೂಪವಾಗಿದೆ. ಈ ಸತ್ ಸ್ವರೂಪವೇ "ಚೈತನ್ಯ"ವಾಗಿದೆ. (ಮುಂದೆ ಶ್ಕತಿ ಸ್ವರೂಪದಲ್ಲಿ ಚೈತನ್ಯಾತ್ಮಕ ಶಕ್ತಿ ಸ್ವರೂಪದಲ್ಲಿ ಅವಿನಾಭಾವ ಸಂಬಂಧದಿಂದ ಪ್ರಕಟವಾಗುವ) ಚಿತ್ ಸ್ವರೂಪದಲ್ಲಿದ್ದು (ಅರಿವು ಅಥವಾ ಪ್ರಜ್ಞೆ ಸ್ವರೂಪದಲ್ಲಿದ್ದು) ಆನಂದ ಸ್ವರೂಪವಾಗಿದೆ. ಇದು ಪರಮತತ್ತ್ವವಾಗಿದ್ದು, ಈ 'ಪರವಸ್ತು' ಸ್ವರೂಪವೇ ಈ ಜಗತ್ತಿನ ಸೃಷ್ಟಿಗೆ ಮೂಲಕಾರಣವಾಗಿದ್ದು; ಈ ಚರಾಚರ ಜಗತ್ತಿನ ಹಿನ್ನೆಲೆಯಲ್ಲಿ 'ಸ್ಥಾಯೀ' ಭಾವದಿಂದ ಅಸ್ಥಿತ್ವದಲ್ಲಿದೆ. ಇದು 'ನಿರಾಕಾರ ಸ್ಥಿತಿ'ಯಲ್ಲಿ ಚೈತನ್ಯ ಸ್ವರೂಪದಲ್ಲಿದ್ದು ಲಿಂಗತತ್ತ್ವವಾಗಿದ್ದು, ನಂತರದಲ್ಲಿ ಚೈತನ್ಯಾತ್ಮಕ ಶಕ್ತಿ ಸ್ವರೂಪದಲ್ಲಿ ಈ ಸೃಷ್ಟಿ ಸ್ವರೂಪದಲ್ಲಿ ಸಾಕಾರ ಸ್ಥಿತಿಯಲ್ಲಿ ನಮಗೆ ಗೋಚರಿಸಿದೆ. "ಅಖಂಡ ಚೈತನ್ಯ "ಆದ್ದರಿಂದ ಈ ಪರವಸ್ತುವು; **Mass, Energy** ಮತ್ತು 'ಭಾವಲಿಂಗ'ವೆಂದು ಹೇಳಲ್ಪಡುತ್ತದೆ. (6–50). ಅ ವ್ಯಕ್ತವೂ (ರೂಪಾದಿಗಳಿಲ್ಲದ) ಭಾವನೆಗೆ ಅತೀತವಾದುದೂ, ಆ 'ಪರಶಿವ'ನೆಂಬ ಹೆಸರಿಸನ ಆ 'ಪರಬ್ರಹ್ಮ'ವೇ ಈ ಇಷ್ಟಲಿಂಗವೂ ಇದು ಸಾಕ್ಷಾತ್ ಅನಿಷ್ಟ (ಸಂಸಾರಪಾಶ ಲಕ್ಷಣವಾದ ಅನಿಷ್ಟ)ವನ್ನು ಪರಿಹರಿಸುವುದರಿಂದ (ಎಚ್ಚರಿಕೆಯಿಂದ) ಶರೀರದ ಮೇಲೆ ಇದನ್ನು ಧರಿಸಬೇಕು. ಸಿ.ನಿ. (6–51) ಲಿಂಗಧಾರಿಯು (ಇಷ್ಟ ಲಿಂಗಧಾರಿಯು) ಸದಾ ಕಾಲದಲ್ಲಿ ಶುದ್ಧನಾಗಿರುತ್ತಾನೆ. ಅವನು ಮನೋಹರವಾದ ತನ್ನ ಇಷ್ಟಲಿಂಗವನ್ನು ಕರಪೀಠದಲ್ಲಿರಿಸಿಕೊಂಡು ಸಮಾಧಾನ ಚಿತ್ತ (ಏಕಾಗ್ರ ಮನಸ್ಸಿನಿಂದ) ಗಂಧ ಪುಷ್ಪಾದಿಗಳಿಂದ ಪೂಜಿಸಬೇಕು. ಸಿ.ಶಿ.(6–54) ವೇದ ಶಾಸ್ತ್ರ ಹಾಗೂ ಪುರಾಣಗಳಲ್ಲಿ ಮತ್ತು ಕಾಮಿಕಾದಿ ವಾತುಲಾಂತಗಳಾದ 28 ಶಿವಾಗಮಗಳಲ್ಲಿ ವೀರಶೈವನಿಗೆ ಲಿಂಗಧಾರಣೆಯು ನಿಶ್ಚಿತವಾಗಿ ಹೇಳಲಾಗಿದೆ. ಸಿ.ಶಿ. (6–58) ಬ್ರಹ್ಮ ಪದ ವಾಚ್ಯವಾದ ಇಷ್ಟ ಲಿಂಗದಲ್ಲಿ ಅಧಿಷ್ಟವಾದ 'ಪರಶಿವ ತತ್ತ್ವ' ರೂಪವಾದ ಹೇ 'ಬ್ರಹ್ಮಣಸ್ಪತೇ' ನೀನು ಸ್ವರೂಪವು ವ್ಯಾಪಕವಾದುದು ಮತ್ತು ನೀನು ಪವಿತ್ರನಾಗಿರುವೆ ಎಂಬುದಾಗಿ ಋಗ್ವೇದವು ಹೇಳುತ್ತದೆ. ಆದ್ದರಿಂದ ಅನಾಮಯವಾದ (ದೋಷರಹಿತವಾದ) ಶಿವರೂಪವಾದ ಪವಿತ್ರವಾದ ಆ ಲಿಂಗವನ್ನು ಧರಿಸಬೇಕು (6–59) ಬ್ರಹ್ಮನ (ಸೃಷ್ಠಿಕರ್ತನ) ಪತಿಯು 'ಈಶ್ವರ'ನು. ಅವನೇ ಬ್ರಹ್ಮವೆಂತಲೂ ಲಿಂಗವೆಂತಲೂ ಹೇಳಲ್ಪಡುತ್ತದೆ. ಈ ಕಾರಣ ಆ ಲಿಂಗವು ಪವಿತ್ರವೆಂದು ವಿಖ್ಯಾತವಾಗಿದೆ. ಅಂತೆಯೇ ಅದರ ಸಂಪರ್ಕದಿಂದ ತನುವು (ಶರೀರವು; ಪಂಚಕ್ಲೇಶ ರಹಿತವಾಗಿ) ಶುಚಿಯಾಗಿರುತ್ತದೆ. ಸಿ.ಶಿ. (6–60). ಅತೃಪ್ತ ತನುವು (ಪಿಂಡಸ್ಥಲಿಯಾಗದವನು, ತಪೋರಹಿತನು) ಆಜ್ಞನು (ಪಿಂಡಜ್ಞಾನ ಸ್ಥಲಯಲ್ಲದವನು) ಆಮನು (ಅಪರಿಪಕ್ವನು, ವೈರಾಗ್ಯವಿಲ್ಲದವನು, ಅರ್ಥಾತ್ ಸಂಸಾರ ಹೇಯ ಸ್ಥಲಕ್ಕೆ ಭಾಜನನಾಗದವನು) ಸಂಸ್ಕಾರ ರಹಿತನು ಮತ್ತು ದೀಕ್ಷೆಹೊಂದದವನು, ಸಾಕ್ಷಾತ್ ತಾನೇ ಉತ್ತಮವಾದ ಲಿಂಗವನ್ನು ಧರಿಸಕೂಡದು. ಸಿ.ಶಿ.

(6–61) ಹೇ 'ರುದ್ರ'ನೇ ನಿನ್ನ ಮಂಗಲ ಸ್ವರೂಪವಾದ ಲಿಂಗರೂಪವಾದ ಯಾವ ತನುವುಂಟೋ, ಅದು ಅಘೋರವು (ಶಾಂತವೂ) ಅಪಾಪಕಾಶಿಯು (ಪಾಪ ರಹಿತ ಭಕ್ತರ ದೇಹದ ಮೇಲೆ ಪ್ರಕಾಶಿಸುವಂತಹುದು) ಎಂಬುದಾಗಿ ಯಜುರ್ವೇಧದಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ಶೈವನು (ಇಷ್ಟಲಿಂಗಧಾರಿಯೂ) ಅಘವರ್ಜಿತನು (ಪಾಪರಹಿತನು) ಆಗಿರುತ್ತಾನೆ. ಸಿ.ಶಿ.(6–62)" ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಶಿವ ಪಂಚಾಕ್ಷರ ಮಹಾಮಂತ್ರವನ್ನು ಪ್ರತಿಪಾದಿಸುವಾಗ 'ಶಿವ' ಸ್ವರೂಪವನ್ನು ಹಾಗೂ ಲಿಂಗತತ್ತ್ವದ ಪ್ರಾಮುಖ್ಯತೆಯನ್ನು ಎತ್ತಿ ಹಿಡಿಯುತ್ತದೆ. ಪಂಚಾಕ್ಷರ ಜಪವೂ ಸಹ 'ಲಿಂಗತತ್ತ್ವ' ಪ್ರತಿಪಾದಕವೇ ಆಗಿರುವುದರಿಂದ ಈ 'ಲಿಂಗವನೆನೆದಡೆ' ಎಂಬ ವಿಭಾಗದಲ್ಲಿ ಸೇರಿಸಲಾಗಿದೆ. "ಶಿವತತ್ತ್ವಕ್ಕಿಂತಲೂ ಪರ (ಶ್ರೇಷ್ಠ)ವಾದ ಬೇರೊಂದು ಮಹತ್ತರವಾದ (ಮಹಿಮಾನ್ವಿತವಾದ) ತತ್ತ್ವವು ಹೇಗೆ ಇರುವುದಿಲ್ಲವೋ, ಹಾಗೆಯೇ ಪಂಚಾಕ್ಷರೀ ಮಂತ್ರಕ್ಕಿಂತಲೂ ಮಹತ್ತರವಾದ ಬೇರೊಂದು ಮಂತ್ರವಿರುವುದಿಲ್ಲ. (8–2) ಜಗತ್ತಿಗೆ ಮೂಲ ಕಾರಣನಾದ 'ಶಿವ'ನನ್ನು ತಿಳಿದುಕೊಂಡ ಬಳಿಕ ಬೇರೆ ಬೇರೆ ದೇವರುಗಳನ್ನು ತಿಳಿದುಕೊಳ್ಳುವ ಅವಶ್ಯಕತೆ ಹೇಗೆ ಇರುವುದಿಲ್ಲವೋ ಹಾಗೆ ಪಂಚಾಕ್ಷರೀ ಮಂತ್ರವನ್ನು ತಿಳಿದುಕೊಂಡ ಬಳಿಕ ಮಂತ್ರಾಂತರಗಳನ್ನು (ಬೇರೆ ಬೇರೆ ಮಂತ್ರಗಳನ್ನು) ತಿಳಿದುಕೊಳ್ಳುವುದರಿಂದ ಏನು ಫಲ? ಸಿ.ಶಿ.(8–3) ಬ್ರಹ್ಮ, ವಿಷ್ಣು, ಮೊದಲಾದ ದೇವರುಗಳಲ್ಲಿ ಶಂಭುವು ಹೇಗೆ ಮಹತ್ತರ (ಸರ್ವೋತ್ತಮ) ನಾಗಿರುವನೋ ಅದರಂತೆ ಸಪ್ತ ಕೋಟಿ ಮಂತ್ರಗಳಲ್ಲಿ ಪಂಚಾಕ್ಷರಿ ಮಂತ್ರವೇ ಸರ್ವೋತ್ತಮವಾಗಿದೆ. ಸಿ.ಶಿ.(8–4) ಸಕಲ ಬ್ರಹ್ಮಾಂಡಗಳಿಗೆ ಪರಮಾತ್ಮನಾದ ಮಹೇಶ್ವರನು ಹೇತು (ಕಾರಣ) ವಾಗಿರುವಂತೆ ಅವನ ವಾಚಕ ಮಂತ್ರವಾದ ಈ ಪಂಚಾಕ್ಷರ ಮಂತ್ರವು ಎಲ್ಲ ಮಂತ್ರಗಳಿಗೆ ಮೂಲ ಕಾರಣವಾಗಿದೆ. ಸಿ.ಶಿ. (8–5). ಈ ಪಂಚಾಕ್ಷರ ಮಂತ್ರವು 'ಪರಶಿವನ' ಅಭಿದಾನವಾಗಿದೆ. ಆ ಪರಶಿವನು ಅಬಿಧೇಯನಾಗಿ ಹೇಳಲ್ಪಟ್ಟಿದ್ದಾನೆ. ಹೀಗೆ ಅಭಿಧಾನ ಅಭಿದೇಯ ಸಂಬಂಧವಿರುವುದರಿಂದ ಈ ಮಂತ್ರದಿಂದ 'ಪರ ಶಿವನ'ನು ಸಿದ್ಧ (ಪ್ರಕಾಶಗೊಳ್ಳುತ್ತಾನೆ)ನಾಗುತ್ತಾನೆ. ಸಿ.ಶಿ. 98–6) ನಮಃ ಎಂಬ ಶಬ್ಧವನ್ನು ಪೂರ್ವದಲ್ಲಿ (ಮೊದಲು) ಹೇಳಬೇಕು. ಅನಂತರ 'ಶಿವಾಯ' ಎಂಬುದಾಗಿ ಹೇಳಬೇಕು. ('ನಮಃ ಶಿವಾಯ' ಇದುವೇ ಪಂಚಾಕ್ಷರ ಮಂತ್ರವು) ಈ ಪಂಚಾಕ್ಷರ ಮಂತ್ರವು ಸಕಲ ಶೃತಿ ವೇದಗಳ ಶಿಖಾಮಣಿಯಾಗಿದೆ ಸಿ.ಶಿ. (8–7). ಆದಿಕಾಲದಿಂದಲೂ (ಮೊದಲಿನಿಂದಲೂ) ಮಂತ್ರಗಳ ಸಂಬಂಧವಿಲ್ಲದಿರುವುದರಿಂದ ಸದಾ ಪರಿಶುದ್ಧನಾಗಿರುವ ಸಚ್ಚಿದಾನಂದ ಘನ (ಸ್ವರೂಪ)ನು, ಪ್ರಭುವಾದ (ಸ್ವತಂತ್ರನೂ ಆದ) ಶಂಭುವೇ ಶಿವನೆಂದು ಕರೆಯಲ್ಪಡುತ್ತಾನೆ. ಸಿ.ಶಿ. (6–8). ಅಶೇಷಗಳಿಗೆ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ) ಆ ಸ್ಪದನಾಗಿರುವ ವಿಶೇಷವಾಗಿ ಎಲ್ಲ ಮಂಗಲಗಳಿಗೂ ಆಶ್ರಯನಾಗಿರುವುದರಿಂದ ತ್ರಿಯಂಬಕನು (ಮುಕ್ಕಣ್ಣನು) ಆದ, ದೇವಾದಿದೇವನಾದ 'ಮಹಾದೇವನು' 'ಶಿವ'ಶಬ್ಧದಿಂದ ಅಭಿದೇಯನಾಗಿರುತ್ತಾನೆ. 'ಶಿವ'ನೆಂಬ ಹೆಸರಿನಿಂದ ಕರೆಯಲ್ಪಡುತ್ತಾನೆ. ಸಿ.ಶಿ. (8–9). ಶಿವನ (ಉಳಿದ ನೀಲಕಂಠ, ಮೃತ್ಯುಂಜಯ, ಮಂತಾದ) ಉಳಿದ ನಾಮಗಳು ಅವನ ಗುಣಗಳನ್ನು ಹೇಳುವುದರ ಮೂಲಕ ಅವನನ್ನು ತಿಳಿಸುತ್ತದೆ. ಸಿ.ಶಿ. (8–10). ಅಪರಿಮಿತ ತೇಜಸ್ವಿಯು ಸಚ್ಚಿದನಂದ ಸ್ವರೂಪನೂ ಆದ ಶಂಭುವಿಗೆ ಶಿವನೆಂಬ ಎರಡು ಅಕ್ಷರಗಳು ಮುಖ್ಯವಾದ ನಾಮಗಳಾಗಿವೆ. ಈ ಶಿವನೆಂಬ ಹೆಸರನ್ನು ಅವಲಂಬಿಸಿಯೇ ಪಂಚಾಕ್ಷರ ಮಂತ್ರವು ಹೇಳಲ್ಪಟ್ಟಿದೆ. ಸಿ.ಶಿ. (8–11). ಈ ಪ್ರಪಂಚದಲ್ಲಿ ವಿಶೇಷವಾಗಿ ಐದು ವಿವರ ಗುಂಪುಗಳಾಗಿರುವ ವಸ್ತುಗಳೆಲ್ಲವೂ ಪಂಚಾಕ್ಷರಮಯಗಳೇ ಆಗಿರುತ್ತವೆ. (ಪಂಚಾಕ್ಷರ ಮಂತ್ರದಿಂದಲೇ ಪ್ರಾಯರ್ಭವಿಸುತ್ತವೆ) ಸಿ.ಶಿ.(8–16). ಶ್ರೇಷ್ಠವಾದ ಈ ಪಂಚಾಕ್ಷರ 'ಮಹಾಮಂತ್ರ'ವು 'ಓಂ'ಕಾರ ದಿಂದ ಕೂಡಿಕೊಂಡಾಗ ವೇದಗಳಲ್ಲಿ ಮತ್ತು ಶೈವಾಗಮಗಳಲ್ಲಿ ಷಡಕ್ಷರ ಎಂದು ಕರೆಯಲ್ಪಡುತ್ತದೆ. ಸಿ.ಶಿ. (8–17). ಷಡಕ್ಷರ ಮಹಾಮಂತ್ರದ ಅಕ್ಷರಗಳು ಇರುವಿಕೆಯಲ್ಲಿ ಮೊದಲಿನ ಅಕ್ಷರವಾದ ಪ್ರಣವವೇ ( ಓಂ ಕಾರವೇ ) ಸಚ್ಚಿದಾನಂದ ಸ್ವರೂಪನಾದ ಕೇವಲ ಮಹಾದೇವನನ್ನೇ ಬೋಧಿಸುತ್ತದೆ. ಸಿ.ಶಿ. (8–18). ಅದ್ವಿತೀಯವಾದ

(ಒಂದೇ ಬಂದಾದ) ಪರಮಾನಂದ ಸ್ವರೂಪವು ನಿಷ್ಪ್ರಪಂಚಕವು (ಪ್ರಾಪಂಚಿಕ ಭೇದ ಶೂನ್ಯವು) ಆದ ಶಿವನೆಂಬ ಹೆಸರಿನ ಪರಬ್ರಹ್ಮವು, ಪ್ರಣವವೊಂದರಿದಲೇ ಪ್ರಕಾಶಿಸುತ್ತದೆ. ಸಿ.ಶಿ. (8–19) 'ಸೋಹಂ' ಎಂಬುವುದು ಶಿವ ಜೀವರ ಅಭೇದವನ್ನು ಬೋಧಿಸುವ ಪರಮಾತ್ಮ ರೂಪವಾದ ಮಂತ್ರವಾಗಿರುತ್ತದೆ. ಇದು ಸನಾತನ (ನಿತ್ಯ) ಎಂಬುದಾಗಿದೆ. ಈ ಮಂತ್ರದಲ್ಲಿ ಯ 'ಹ' ಕಾರ ಮತ್ತು 'ಸ' ಕಾರಗಳು ಲೋಪವಾದಾಗ 'ಓಂ'ಕಾರ ವೆಂಬ ಏಕಾಕ್ಷರ ಮಂತ್ರವು ಪ್ರಕಟವಾಗುತ್ತದೆ. ಸಿ.ಶಿ. (8–20) ಈ ಪ್ರಣವ (ಓಂಕಾರ) ಮಂತ್ರದಿಂದ ನಿಷ್ಕಲವಾದ ಶಿವನು ಬೋಧಿಸಲ್ಪಡುತ್ತಾನೆ. ಅದರಂತೆ ಪಂಚಾಕ್ಷರ ಮಂತ್ರದಿಂದ ಶಿವನ ಸದ್ಯೋಜಾತಾದಿ ಪಂಚಬ್ರಹ್ಮ ಸ್ವರೂಪವು ಹೇಳಲ್ಪಡುತ್ತದೆ. (8–21) ನಿಷ್ಕರಿನಾದ ಶಿವನು ಸಂವಿತ್ (ಜ್ಞಾನ, ಪ್ರಜ್ಞಾ) ಸ್ವರೂಪನು ಆಗಿರುತ್ತಾನೆ. ಸಕಲನಾದ ಪಂಚಬ್ರಹ್ಮನು ವಿಶ್ವರೂಪನಾಗಿರುತ್ತಾನೆ. ಹೀಗೆ ಈ ಷಡಕ್ಷರ ಮಂತ್ರದಿಂದ ಶಿವನ ಉಭಯ ರೂಪಗಳು (ನಿಷ್ಕ, ಸಕಲ ಸ್ವರೂಪಗಳು, ನಿರಾಕಾರ, ಸಾಕಾರ) ನಿರೂಪಿತವಾಗುತ್ತವೆ (8–22) ಈಶ್ವರನನ್ನು ಪ್ರತಿಪಾದಿಸುವ (ಈಶ್ವರ ರೂಪವನ್ನು ಹೇಳುವ, ಜಂಗಮ ಸ್ವರೂಪವನ್ನು ತಿಳಿಸುವ) ಈ ಪಂಚಾಕ್ಷರ ಮಹಾಮಂತ್ರ'ವು ಮಹಾಶಕ್ತಿಶಾಲಿಯಾದುದಾಗಿದೆ. ಅಂತೆಯೇ ಒಂದೇ ಸಾರಿ ಉಚ್ಚರಿಸಿದರೂ ಸಕಲ ಸಿದ್ಧಿಗಳನ್ನೂ ಕೊಡುವಂತಹುದಾಗಿದೆ. ಸಿ.ಶಿ. (8–41)," ಕಾರಣ ಈ ಶಿವ ಪಂಚಾಕ್ಷರಿ ಮಂತ್ರವು ಸಾಧಕನಲ್ಲಿನ ಚಕ್ರಶುದ್ಧಿಗಳನ್ನು ಮಾಡುತ್ತದೆ. "ಬ್ರಹ್ಮ, ವಿಷ್ಣು, ಮೊದಲಾದ ದೇವೆಗಳು ಈ ಪಂಚಾಕ್ಷರ ಮಹಾಮಂತ್ರದ ಜಪದ ಮಹಾತ್ಮ್ಯದಿಂದ ಈ ಜಗತ್ತಿನ ಸೃಷ್ಠಿ, ಸ್ಥಿತಿ ಮತ್ತು ಸಂಹಾರ ಕ್ರಿಯೆಗಳನ್ನು ಮಾಡಲು ಸಮರ್ಥರಾಗುತ್ತಾರೆ. ಸಿ.ಶಿ. (8–48). ಇಲ್ಲಿ ಪಂಚಾಕ್ಷರ ಮಂತ್ರದ ವಿಷಯವಾಗಿ ಹೆಚ್ಚಿಗೆ ಹೇಳುವುದರಿಂದ ಏನು ಪ್ರಯೋಜನ? ಯಾವ ಮಹಾತ್ಮನಾದ ದೇವದೇವನಾದ ಮಹಾದೇವನನ್ನು ಪೂಜಿಸುತ್ತಾ ಪರಮಭಕ್ತಿಯಿಂದ ಪ್ರಣವಾಕ್ಷರವೇ ಮೊದಲುಳ್ಳ ಪಂಚಾಕ್ಷರ ಮಹಾಮಂತ್ರವನ್ನು (ಓಂ ನಮಃ ಶಿವಾಯ ಮಂತ್ರವನ್ನು) ಜಪಿಸುತ್ತಾನೆ. ಅವನು ದುರಿತ (ಪಾಪ) ಬಂಧನದಿಂದ ಬಿಡುಗಡೆಯಾಗಿ 'ಮೋಕ್ಷ' ಲಕ್ಷ್ಮಿಯನ್ನು ಪಡೆದುಕೊಳ್ಳುತ್ತಾನೆ. ಸಿ.ಶಿ.(8–49) ಗುರುಮಹಾತ್ಮೆಯ ದೆಸೆಯಿಂದ ಮತ್ತು ನಿಜವಾದ ಜ್ಞಾನದ ಅತಿರೇಕವಾದ (ತನಗುಂಟಾದ ಶಿವಜ್ಞಾನದ 'ಅತಿಶಯದಿಂದ) ಲಿಂಗದ ಮಹಾತ್ಮ್ಯೆಯೂ ಸಹ ಸರ್ವೋತ್ಕೃಷ್ಟಿಯಾಗಿ ತೋರುತ್ತದೆ. ಸಿ.ಶಿ. (V-25) ಶಿವನ ಚಿದ್ರೂಪದ ಚಿನಹವೇಶಾಂಕರ ಲಿಂಗವು. ಇದುವೇ ಎಲ್ಲಕ್ಕೂ ಕಾರಣವಾಗಿರುತ್ತದೆ. ಇದನ್ನು ಗುರುವಿನ ಬೋಧನೆಯಿಂದುಂಟಾದ ಅರಿವಿನಿಂದಲೇ ತಿಳಿದುಕೊಳ್ಳಬೇಕು. ಸಿ.ಶಿ.(11–26) ಪರಮ ಪವಿತ್ರವೂ, ನಿರ್ಮಲವೂ,

<u>ಪುಟ–83</u>

ಸನಾತನವೂ, ಆದ ಬ್ರಹ್ಮತತ್ತ್ವವೇ ಲಿಂಗವು. ಚಿದ್ರೂಪವಾದ ಸದಾನಂದ ರೂಪವಾದ ಶಿವನೆಂಬ ಹೆಸರುಳ್ಳ ಆ ಲಿಂಗವು ನಿರಂಕುಶವಾದುದಾಗಿದೆ. (ಈ ಲಿಂಗತತ್ತ್ವವೇ ಸರ್ವರ ಮೇಲೆ ಶಾಸನ ಮಾಡುವುದರಿಂದ, ಇದರ ಮೇಲೆ ಶಾಸನ ಮಾಡುವವರು ಯಾರು ಇರುವುದಿಲ್ಲ) ಸಿ.ಶಿ. (11–27) ಈ ಲಿಂಗವು ಸರ್ವ ಲೋಕಗಳಿಗೆ (ಹದಿನಾಲ್ಕು ಭುವನಗಳ ನಿರ್ಮಾಣಕ್ಕೆ) ಕಾರಣವಾಗಿದೆ. ವೇದಗಳ ಉತ್ಪತ್ತಿಗೂ ಸಹ ಇದುವೇ ಕಾರಣವಾಗಿದೆ. ಸರ್ವತತ್ತ್ವಗಳನ್ನೊಳಗೊಂಡ ಪರಿಪೂರ್ಣ ತತ್ತ್ವವಾಗಿದೆ. ಮತ್ತು ಜನ್ಮವಾರಿಧಿಯನ್ನು (ಸಂಸಾರ ಸಾಗರವನ್ನು) ತಾರಣಗೊಳಿಸುವುದಾಗಿದೆ. (ದಾಟಿಸುವಂತಹುದಾಗಿದೆ.) ಸಿ.ಶಿ. (11–28). ಯೋಗಿಗಳ ಹೃದಯದಲ್ಲಿರುವ ಜ್ಯೋತಿರ್ಮಯವಾದ ಪ್ರಕಾಶಮಾನವಾದ) ಅನಿರ್ದೇಶ್ಯವಾದ (ತೋರಿಸಲು ಬಾರದಿರವ ಆ ಲಿಂಗತತ್ತ್ವವು) ಈ ಲೋಕದಲ್ಲಿ ಮಹಾಗುರುವಿನ ದಯೆವಿಲ್ಲದೆ ತಿಳಿದುಕೊಳ್ಳಲು ಸಾಧ್ಯ! ಸಿ.ಶಿ. (11–29) ಪೂರ್ವದಲ್ಲಿ ಜ್ಯೋತಿ ರೂಪವಾದ ಆ ಲಿಂಗವು ಬ್ರಹ್ಮ ಮತ್ತು ವಿಷ್ಣುಗಳಿಂದ ತಿಳಿದುಕೊಳ್ಳು ಅಸಾಧ್ಯವಾಯಿತು. ಅಂತಹ ಆ ಲಿಂಗವು ಯಾರಿಂದ ತಾನೇ ತಿಳಿದುಕೊಳ್ಳಲು ಸಾಧ್ಯವಾಯಿತು! ಸಿ.ಶಿ. (11–30)ಈ ಲಿಂಗದ ವಿಷಯದಲ್ಲಿ

ಬಹಳಷ್ಟು ಹೇಳುವುದರಿಂದ ಏನು ಪ್ರಯೋಜನ! ಪಾಶಬಂಧನದಿಂದ ಮುಕ್ತರಾದ ಯೋಗಿಗಳು ಎಲ್ಲಿ ಲೀನವಾಗುತ್ತಾರೆಯೋ ಸನಾತನವಾದ ಆ ಬ್ರಹ್ಮ ತತ್ತ್ವವೇ ಲಿಂಗವು ಸಿ.ಶಿ. (11–31)

## Important Note:

'ಲಿಂಗ'ವೆಂದರೆ, 'ಲಿಂಗತತ್ತ್ವ'ವಾಗಿದೆ. ಶಕ್ತಿ ವಿಶಿಷ್ಟ ಅಖಂಡ ಚೈತನ್ಯವೇ 'ಲಿಂಗತತ್ತ್ವ'ವಾಗಿದೆ. ಈ ಶಕ್ತಿ ವಿಶಿಷ್ಟ ಅಖಂಡ ಚೈತನ್ಯವೇ 'ಲಿಂಗತತ್ತ್ವ'ವಾಗಿದೆ. ಶಕ್ತಿ ವಿಶಿಷ್ಟ ಅಖಂಡ ಚೈತನ್ಯ ಸ್ವರೂಪದಲ್ಲಿ ಶಕ್ತಿ ಪ್ರಕಟಗೊಂಡಿದ್ದರೆ, ಅದು 'ಸಾಕಾರ ಲಿಂಗ ತತ್ತ್ವ'ವಾಗಿದೆ. 'ಶಕ್ತಿ' ಎಂದರೆ ಅಖಂಡ ಚೈತನ್ಯವು ಯಾವ ಮಾಧ್ಯಮದ ಮೂಲಕ ಹರಿದಾಗ ಅದು 'ಶಕ್ತಿ'ಯಾಗುತ್ತದೆ. ಇಲ್ಲಿ ಶಕ್ತಿ ಪ್ರವಹಿಸುವ ಮಾಧ್ಯಮವೂ ಸಹ ಚೈತನ್ಯಾತ್ಮಕವಾಗಿದೆ. ಪೀಠಿಕೆಯು (ಪ್ರಾಣಿ ಬಟ್ಟಲು) ಪರಮಶಕ್ತಿ ಸ್ವರೂಪವಾದುದು. ಲಿಂಗವು (ಬಾಣವು) ಸಾಕ್ಷಾತ್ ಪರಶಿವನ ಸ್ವರೂಪವಾಗಿರುತ್ತದೆ. ಈ ಶಿವ–ಶಕ್ತಿ ಸಂಯುಕ್ತವಾದ ಲಿಂಗವೇ ವಿಶ್ವವೆಂಬುದಾಗಿ ಹೇಳಲ್ಪಡುತ್ತದೆ. (ಅಖಂಡ ಚೈತನ್ಯಾತ್ಮಕ ಶಕ್ತಿ ಸ್ವರೂಪವಾದದ್ದೇ ಈ ವಿಶ್ವವು ಎಂದು ತಿಳಿದುಕೊಳ್ಳಬೇಕು) ಸಿ.ಶಿ. (11–32) ಬ್ರಹ್ಮನೇ ಮೊದಲಾ ಎಲ್ಲ ದೇವತೆಗಳು ಮತ್ತು ಶಾನಕಾದಿ ಮುನಿಗಳು ಈ ಶಿವ ಲಿಂಗಾರ್ಚನೆಯಿಂದಲೇ ತಮ್ಮ ತಮ್ಮ ಪದವಿಗಳನ್ನು ಪ್ರಾಪ್ತ ಮಾಡಿಕೊಂಡಿರುತ್ತಾರೆ. ಸಿ.ಶಿ. (11–33) ಅನ್ಯ ದೇವತೆಗಳೊಡನೆ ಸಾದೃಶ್ಯತ್ವವು ಇಲ್ಲದಿರುವ ವಿಶ್ವಾಧಿಪತ್ಯವು, ಲಿಂಗ ಮೂರ್ತಿಯಾದ 'ಈಶ್ವರ'ನಿಗೆ ಸ್ವಭಾವ ಸಿದ್ಧವಾದದ್ದು ಎಂದು ಸನಾತನವಾದ ಶೃತಿಯು ಹೇಗಿರುತ್ತದೆ. ಸಿ.ಶಿ. (11–34) ಇಲ್ಲಿಯವರೆವಿಗೆ 'ಲಿಂಗತತ್ತ್ವ' ವಿಚಾರದಲ್ಲಿ ಲಿಂಗಾಧಾರಣ ಸ್ಥಲ, ಮತ್ತು ಪಂಚಾಕ್ಷರ ಜಪಸ್ಥಲಗಳಲ್ಲಿ ಶ್ರಿ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಪ್ರತಿಪಾದಿಸಿರುವಂತೆ ಪ್ರಮುಖವಾದ ವಿಚಾರಗಳನ್ನು ಪ್ರತಿಪಾದಿಸಲಾಗಿದೆ. 'ಒಬ್ಬನೇ ಆದ ಶಿವನು ಸ್ವತಃ ಗುರು, ಜಂಗಮ (ಈಶ್ವರ ತತ್ತ್ವ) ಲಿಂಗವೆಂಬ ತ್ರಿವಿಧ ಸ್ವರೂಪವನ್ನು ತಾಳಿ ಭಕ್ತರಿಗೆ 'ಭಕ್ತಿ, ಮುಕ್ತಿ'ಗಳನ್ನು ಅನುಗ್ರಹಿಸುತ್ತಾನೆ. ಸಿ.ಶಿ. (9–59) (ಇಲ್ಲಿ, ಗುರು, ಜಂಗಮ, ಲಿಂಗಗಳು ನಿರಾಕಾರ ಲಿಂಗತತ್ತ್ವ; ಈಶ್ವರ ತತ್ತ್ವ ಸಾಕಾರಲಿಂಗತತ್ತ್ವಗಳಾಗಿ ನಿರುಪಾಧಿಕತತ್ತ್ವಗಳಾಗಿದ್ದು, ಇವೇ ತತ್ತ್ವಗಳು ವ್ಯಕ್ತಿಗಳಾಗಿಯೂ ಸಹ ಉಪಾಧಿಕ ತತ್ತ್ವಗಳಾಗಿ ಆಚರಣೆಗಳಲ್ಲಿವೆ). ಲಿಂಗವು ಜಂಗಮ ಲಿಂಗವೆಂತಲೂ ಅಜಂಗಮಲಿಂಗವೆಂತಲೂ ಎರಡು ವಿಧವಾಗಿರುತ್ತದೆ. ಅಜಂಗಮ ಲಿಂಗದಲ್ಲಿ (ಸ್ಥಿರ ಲಿಂಗದಲ್ಲಿ) ಯಾವ ರೀತಿಯಾಗಿ ಭಕ್ತಿಯು ಮಾಡಲ್ಪಡುತ್ತದೆಯೋ ಅದರಂತೆ 'ಜಂಗಮ ಲಿಂಗ'ದಲ್ಲಿಯೂ ಭಕ್ತಿಯನ್ನು ಮಾಡಬೇಕು. ಸಿ.ಶಿ. (9–60) ಮೃತ್ (ಮಣ್ಣು) ಶಿಲಾ (ಕಲ್ಲು) ಮುಂತಾದವುಗಳಿಂದ ನಿರ್ಮಿಸಲ್ಪಟ್ಟು ಯಾವ ಲಿಂಗವಿದೆಯೋ ಅದು ಅಜಂಗಮ ಲಿಂಗವು ಅದಕ್ಕಿಂತಲೂ ಶ್ರೇಷ್ಠವಾದ್ದು ಜಂಗಮಲಿಂಗವು, ಅದುವೇ ಶಿವಯೋಗಿ (ಅಥವಾ ಶರಣ)ನೆಂದು ಸುಪ್ರಸಿದ್ಧವಾಗಿರುತ್ತದೆ. ಸಿ.ಶಿ.(9–61). ಆಚರಲಿಂಗದಲ್ಲಿ (ಅಜಂಗನು ಲಿಂಗದಲ್ಲಿ) ಮಂತ್ರ ಸಂಸ್ಕಾರದಿಂದ ಶಂಕರನು ಅಲ್ಲಿ ವಾಸಿಸುತ್ತಾನೆ. ಇನ್ನು ಚರ ಲಿಂಗದಲ್ಲಿ (ಶಿವಯೋಗಿ ಅಥವಾ ಶರಣನಲ್ಲಿ) ಮಹೇಶ್ವರನು ಸದಾ ಕಾಲದಲ್ಲಿಯೂ (ಯಾವಾಗಲೂ ವಾಸವಾಗಿರುತ್ತಾನೆ ಸಿ.ಶಿ. (9–62) "ಈ ವಿಚಾರಗಳು ತ್ರಿವಿಧ ಸಂಪತ್ತು ಸ್ಥಲದ ಲಿಂಗತತ್ತ್ವ ಸಂಬಂಧಿ ವಿಚಾರಗಳಾಗಿವೆ. ಇನ್ನು ಉಭಯ ಸ್ಥಲದಲ್ಲಿ ಗುರು, ಲಿಂಗಗಳ ಪ್ರಾಮುಖ್ಯತೆಯನ್ನು ಪ್ರತಿಪಾದಿಸಿದೆ. "ಗುರು"ವನ್ನು ಅರ್ಚಿಸಿದರೆ ಸಾಕ್ಷಾತ್ 'ಶಿವನೇ' ಅರ್ಚಿಸಲ್ಪಡುತ್ತಾನೆ. ಅವರಿಬ್ಬರಲ್ಲಿ 'ತಾತ್ವಿಕವಾಗಿ' ಏಕತ್ವವಿರುವುದರಿಂದ ಅವರಲ್ಲಿ ಭೇದವು ಕಿಂಚಿತ್ತು ಇರುವುದಿರಲ್ಲ" ಸಿ.ಶಿ. (9–51) "ಇಲ್ಲಿ ಇಷ್ಟಲಿಂಗವೇ 'ಗುರು ಸ್ವರೂಪ'ವೆಂಬ ವಿಚಾರವಿದೆ. ಅಕ್ಕಮಹಾದೇವಿಯವರು ತಮ್ಮ ಸೃಷ್ಟಿವಚನದಲ್ಲಿ ಇಷ್ಟ ಲಿಂಗ, ಪ್ರಾಣಲಿಂಗ, ಭಾವಲಿಂಗಗಳನ್ನು (ತ್ರಿವಿಧ ಲಿಂಗಗಳಿದ್ದು, ತ್ರಿವಿಧ ಲಿಂಗಗಳುಳಿದು) ಕಾಯಗುರು, ಪ್ರಾಣಲಿಂಗ, ಜ್ಞಾನ ಜಂಗಮವೆಂದು ಕರೆದಿದ್ದಾರೆ. ಅಂದರೆ, ಇಷ್ಟಲಿಂಗವನ್ನು 'ಕಾಯಗುರು'ವೆಂದು ಸಂಬೋಧಿಸಿದ್ದಾರೆ. ಅಂದರೆ ಇಷ್ಟಲಿಂಗದ ಆರಾಧನೆಯ 'ಗುರು' ಸ್ವರೂಪದಲ್ಲಿ

'ಲಿಂಗತತ್ತ್ವ'ವಾಗುವಿಕೆಯ ನೆಲೆಯಲ್ಲಿ ಮಾರ್ಗದರ್ಶನ ಮಾಡುತ್ತದೆ. ಈ ಗುರುವಿನ ಸ್ವರೂಪದಲ್ಲಿ ಸಾಧಕನ ನೆತ್ತಿಯಲ್ಲಿನ ನಿಷ್ಕಲ ಲಿಂಗವೂ ಸಹ ಅವನಿಗೆ ಗುರುತತ್ತ್ವ ಸ್ವರೂಪದಲ್ಲಿ ಮಾರ್ಗ ದರ್ಶನ ಮಾಡುತ್ತದೆ. ಸಾಧಕನ ಮನಸ್ಸು ತನ್ನಂತೆಯೇ ಆಗುವವರೆವಿಗೆ, ಮಾರ್ಗದರ್ಶನ ಮಾಡುತ್ತಿರುತ್ತದೆ. ದೀಕ್ಷಾಕಾರ್ಯದಿಂದ ಉಪಾಧಿಕ ಶ್ರೀ ಗುರುವು ಸಾಧಕನ ನೆತ್ತಿಯಲ್ಲಿನ ಚಿತ್ಕಳೆಯನ್ನು ಇಷ್ಟಲಿಂಗದಲ್ಲಿ ಆದಾಯಿಸಿ ಕೊಡುವುದರಿಂದ, ಇಷ್ಟಲಿಂಗವು 'ಗುರು ಸ್ವರೂಪ'ದಲ್ಲಿದ್ದ 'ಕಾಯಗುರು'ವಗಿದೆ. ಈ ರೀತಿಯಲ್ಲಿ 'ಲಿಂಗವನ್ನು' ಅಥವಾ 'ಲಿಂಗತತ್ತ್ವವನ್ನು' ಸಾಧಕನು ಸುಪ್ರಭಾತ ಸಮಯದಲ್ಲಿ ಅರ್ತಿಯಲ್ಲಿ ನೆನೆಯಬೇಕು. ಅಂದರೆ ಲಿಂಗತತ್ತ್ವ ಹಾಗೂ ಲಿಂಗತತ್ತ್ವ ಸೂಂಘಯಾದ ದಶ–ಚಕ್ರಗಳು ಪೌರಾಣಿಕ ಹೆಸರುಗಳು, ಚಕ್ರ ಶುದ್ಧಿ ಕ್ರಮಗಳು ಮುಂತಾದ ಎಲ್ಲಾ ವಿಚಾರಗಳನ್ನು 36–ತತ್ತ್ವಗಳ ಹಿನ್ನೆಲೆಯಲ್ಲಿ ಗ್ರಹಿಸಿ ಮಾನನ ಮಾಡಿಕೊಳ್ಳಬೇಕು.

**ಪುಟ 86**

ಹೀಗೆ ಸಾಧಕನು 'ಲಿಂಗ'ವನ್ನು (ಇಷ್ಟಿಲಿಂಗ ಸ್ವರೂಪವನ್ನು) ನೆನೆದರೆ ಅವನಿಗೆ 'ತಪ್ಪೊಂದು ಕಾಲಕರ್ಮಂಗಳು, ಅಪಮೃತ್ಯು"ವೆಂದು ಬಸವಣ್ಣನವರು ತಮ್ಮ ವಚನದಲ್ಲಿ ಪ್ರತಿಪಾದಿಸಿದ್ದಾರೆ. ಈ ಮಾತುಗಳು 28 ಶಿವಾಗಮಗಳ ಮಾತೇ ಆಗಿದೆ. ಮೇಲಿನ ಲಿಂಗತತ್ತ್ವ ಸ್ವರೂಪದಲ್ಲಿ ಈ ವಿಚಾರಗಳ ಸಮರ್ಥನೆಯೂ ಸಹ ಸೇರಿಕೊಂಡಿರುವುದನ್ನು ಗಮನಿಸಬಹುದಾಗಿದೆ. ಇನ್ನು ಎರಡನೆಯ ಸೂತ್ರವು 'ಲಿಂಗ'ವನ್ನು ನೆನೆದ ಮೇಲೆ (ಸೂತ್ರ–2) : ದೇವ ಪೂಜೆಯ ಮಾಟ ದುರಿತ ಬಂಧನ ದೋಟ" ಎಂಬ ಸೂತ್ರವಾಗಿದೆ. ಲಿಂಗತತ್ತ್ವ ಸ್ವರೂಪ ಮತ್ತು ಅದರ ಸಂಬಂಧಿತ ವಿಚಾರಗಳನ್ನು ನೆನೆದ ಮೇಲೆ ಮನವು "ಲಿಂಗ ಪೂಜೆ"ಯ ಕ್ರಿಯೆಗಳಿಗೆ ಅನುವಾಗುತ್ತದೆ: ಇಲ್ಲಿ 'ದೇವ ಪೂಜೆ'ಯ ವಿಚಾರದಲ್ಲಿ ಸಾಧಕನ ಮನೋಧರ್ಮ ಹೇಗಿರಬೇಕು, ಮತ್ತು ಅವನು ಯಾವ ಯಾವ ಕ್ರಿಯೆಗಳಲ್ಲಿ ತೊಡಗಿಕೊಂಡಿರಬೇಕು ಎಂಬ ವಿಚಾರದಲ್ಲಿ "ಬಸವಣ್ಣ"ನವರ ಅಭಿಪ್ರಾಯಗಳನ್ನು ಅವರ ವಚನಗಳಿಂದಲೇ ಸಂಗ್ರಹಿಸಿ, ಇಲ್ಲಿ ನಿರೂಪಿಸಲಾಗಿದೆ. ಈ ಅಭಿಪ್ರಾಯಗಳಲ್ಲಿ' ಮೊದಲನೆಯ ವರ್ಗದ ಅಭಿಪ್ರಾಯಗಳು ಅವರ "ಅಷ್ಟ ವಿಧಾರ್ಚನೆ" "ಷೋಡಶೋಪಚಾರ"ಗಳ ಹಿನ್ನೆಲೆಯಲ್ಲಿ ಪ್ರತಿಪಾದಿತ ವಚನಗಳಲ್ಲಿದೆ. "ಎರಡನೆಯ ವರ್ಗದ ಅಭಿಪ್ರಾಯಗಳೂ ಅವರ ಇತರೇ ವಚನಗಳಿಂದ ಸಂಗ್ರಹ ಮಾಡಿರುವ ವಿಚಾರಗಳಿವೆ. ಮೊದಲ ವರ್ಗದ ಅಭಿಪ್ರಾಯಗಳು:– "ಕೂಡಲ ಸಂಗಮದೇವನನ್ನು ಅರಿಯಬೇಕು (1) ಲಿಂಗತತ್ತ್ವವನ್ನು ಮುಟ್ಟಬೇಕು ಮನಸ್ಸು ಲಿಂಗತತ್ತ್ವವನ್ನು ಮುಚ್ಚು ಮುಟ್ಟಿದಾಗ ಪ್ರಾನದಲ್ಲಿನ ಅರಿವು ಸಾಧಕನಿಗೆ ಗೊತ್ತಾಗುತ್ತದೆ (2) ಭಾವ, ಜ್ಞಾನ, ಮುಖಗಳಲ್ಲಿ ಲಿಂಗತತ್ತ್ವವನ್ನು ಅರಿಯಬೇಕು, (3) ಸಮ್ಯಕ್ ದೃಷ್ಟಿಯನ್ನು ಬೆಳೆಸಿಕೊಳ್ಳಬೇಕು (4) ಅಂದಂದಿನ ಕೃತ್ಯ ಅಂದಂದಿಗೆ ಮಾಡಿ ಶುದ್ಧರಾಗಬೇಕು. (5) ಹಂಗು (ಸಂಸಾರ, ಭವ) ಹರಿಯಬೇಕು **(Should have highest prionity at the time of worship)** (6) ಮಾಡುವ ಹಮ್ಮೀರ ಕೂಡದು (7) ಅಂಗ್ಲ ಜಂಗಮ, ಪ್ರಸಾದ ಮಹಾತ್ಮೆಯನ್ನು ಅರಿತಿರಬೇಕು. (8) ಪೂಜೆ, ಲಿಂಗಾರ್ಜನೆ ಕೇವಲ ಉಪಚಾರವಾಗಬಾರದು. (9) ತನುವಿಗೆ ತಾಗಿದ ಸುಖವನ್ನು ಜಂಗಮಕ್ಕೆ ಅರ್ಪಿಸುವುದನ್ನು ಅರಿತಿರಬೇಕು (10) 'ಸ್ಥಾವರ – ಜಂಗಮ'ಗಳು ಒಂದೇ ಎಂದು ತಿಳೀದಿರಬೇಕು. ಸ್ಥಾವರವೆಂದರೆ ದೇಹಾಧಾರಿತ 'ಗುರು', 'ಲಿಂಗ ತತ್ವಗಳು' 'ಜಂಗಮವೆಂದರೆ: ಈಶ್ವರತತ್ತ್ವ (ಪ್ರಾನದಲ್ಲಿನ ಅರಿವು), ಅಥವಾ ಜೀವಾತ್ಮ ತತ್ತ್ವ; ಒಂದು 'ಜ್ಞಾನ ಜಂಗಮ ತತ್ತ್ವ'ವಾದರೆ, ಮತ್ತೊಂದು 'ಜೀವಾತ್ಮ ಜಂಗಮ ತತ್ತ್ವ' ಅಥವಾ 'ಪ್ರತ್ಯಗಾತ್ಮ ತತ್ತ್ವ' ವಾಗಿದೆ. ಈ ಜ್ಞಾನ ಜಂಗಮ ತತ್ತ್ವವನ್ನು 'ಹಿರಣ್ಯ ಗರ್ಭ ತತ್ವ':ವೆಂದೂ ಸಹ ತಿಳಿಯಲಾಗಿದೆ. ಈ ಗುರು, ಲಿಂಗ, ಜಂಗಮ ತತ್ತ್ವಗಳು 'ತ್ರಿವಿಧ ಶೂನ್ಯ ತತ್ತ್ವ'ಗಳಾಗಿವೆ. (11) ಜಂಗಮವನ್ನು ಪ್ರಾಣಲಿಂಗವೆಂದು ತಿಳಿಯಬೇಕು (12), ಮಾಡಿದ ಪೂಜೆಯನ್ನು ನೋಡಬೇಕು (13) ಶಿವತತ್ತ್ವ ಗೀತವ ಪಾಡೋದು. (14) ಶಿವನ ಮುಂದೆ

ನಲಿದಾಡೋದು. (15) ಭಕ್ತಿಯ ಸಂಭಾಷಣೆ ಮಾಡೊದು. ಎರಡನೆಯ ವರ್ಗದ ಅಭಿಪ್ರಾಯಗಳು: ದೇವನೊಬ್ಬ ನಾಮ ಹಲವು (18) ಮಹಾದೇವನೇ ಅತ್ಯಂತ ದೊಡ್ಡ ದೇವರು. (ಸಹಸ್ರಾರದ ಅನುಭವ) (19) ಈ ಮಹಾದೇವನ ಇತರೇ ಹೆಸರುಗಳು, ಪಶುಪತಿ, ರುದ್ರ, ಶಂಭು, ಸಾಂಬ, ಮಹೇಶ, ಸಚ್ಚಿದಾನಂದ, ನೀಲಕಂಠ, ತ್ರಿಲೋಚನ, ಶಂಕರ, ಉಮಾಪತೇ, ಮಹೇಶ್ವರ, ಪರಮೇಶ್ವರ, ಅತೀತ ಪ್ರಜ್ಞೆ, (20) ಶಿವನೇಕೋದೇವ (ಇದು ಆಜ್ಞಾ ಚಕ್ರದ ಅನುಭಾವ) (21) ಮಹಾದೇವನ ಸ್ಥಿತಿಯನ್ನು ಭರ್ಗೋದೇವಸ್ಯಧೀಮಹಿಃ' ಎಂದು ಗಾಯತ್ರಿ ಮಂತ್ರ ಕರೆದಿದೆ. ಇದು ಸತ್ಯಲೋಕ (22) ಈ ಮಹಾದೇವನ ಸ್ಥಿತಿಯನ್ನು 'ಅಣೋರಣೀಯಾನ್‌ವಂಹತೋಮಹೀಯಾನ್' ಎಂದು ಕರೆಯಲಾಗಿದೆ. (ಇದು ಶೃತಿಗಳ ಅಭಿಪ್ರಾಯವಾಗಿದೆ) ಅತ್ಯತಿಷ್ಠದಶಾಂಗುಲಗಾಗಿದ್ದಾನೆ. (23) ಸಾಕಾರಸ್ಥಿತಿ ಮಹಾಲಿಂಗವಾದರೆ, ಇಲ್ಲಿಂದ ಮುಂದೆ ಅದು ನಿರಾಕಾರ ಪರಮಾತ್ಮ ಸ್ಥಿತಿಯನ್ನು ನಿವೃತ್ತಿ ಶಕ್ತಿಗಳಿಂದ ಉಂಟಾಗುತ್ತದೆ. ಅಲ್ಲಿಂದ ಮೇಲೆ ಶಬ್ಧವಿಲ್ಲ. (ಏಳು ನಿವೃತ್ತಿ ಶಕ್ತಿಗಳು, ಬಿಂದು, ಬೋಧಿಸಿ, ವ್ಯಾಪಕ, ನಾದ, ನಾದಾಂತ, (ಮಹಾನಾದ) ಸಮನಿ, ಉನ್ಮನಿ) "ಉನ್ಮನಿಯ ಮನ ಪವನದ ಮೇಲೆ 'ವಚನ' ಆಧಾರ, ಸ್ವಾಧಿಷ್ಠಾನ' 'ಅಕ್ಕಮಹಾದೇವಿ' (24)

ಪುಟ–88

ಈ ಏಳು ನಿವೃತ್ತಿ ಶಕ್ತಿಗಳು ಆಜ್ಞಾ ಚಕ್ರದಿಂದ ಹಿಡಿದು ಸಹಸ್ರಾಕಾರದವರೆವಿಗೆ ಅಭಿವ್ಯಕ್ತಗೊಳ್ಳುತ್ತದೆ. (25) ಜಂಗಮ ರೋಗ, ಲಿಂಗಜಂಗಮದ (ಪ್ರಸಾದಗಳ) ಅರಿವು ಸಾಧಕನಿಗೆ ಇರಬೇಕು. (ಇದರ ವಿವರಣೆಗಳ ಸಂಪೂರ್ಣ ಪರಿಚಯ ಸಾಧಕನಿಗೆ ಇರಬೇಕು) (26) ಸಕಲ ನೀನೇ, ನಿಷ್ಕಲ ನೀನೆ, ಸಕಲ–ನಿಷ್ಕಳ ಕೂಡಿಕೊಂಡಿದ್ದಾನೆ. ಅಂದರೆ (ನಿಷ್ಕಳ) – ಮಹಾದೇವ – 'ತತ್ತ್ವ; (ಗುರು) (ಸಕಳ–ನಿಷ್ಕಳ) – ದೇವ; ಶಿವ – 10 ತತ್ತ್ವ (ಲಿಂಗ) (ಸಕಳ) – ಜೀವಾತ್ಮ 25 ತತ್ವ (ಜಂಗಮ) ಇದು ಇಡೀ ಸೃಷ್ಟಿ – 36 ತತ್ತ್ವಗಳು (27). ವಿಷ್ಣು (ಅನಾಹುತ ಚಕ್ರದ ಅನುಭಾವ) ಇಲ್ಲಿ ಈಶ್ವರ ತಕ್ಷಣವಾಗಿದೆ (ಅಬಿವ್ಯಕ್ತವಾಗಿದೆ) (28) ಬ್ರಹ್ಮ ಸ್ವಾಧಿಷ್ಠಾನದ ಅನುಭಾವ) (29) ಬ್ರಹ್ಮಂಗಿ ಪ್ರಳಯ ವಿಷ್ಣುವಿಂಗೆ ಮರಣ ಉಂಟು, ಕೂಡಲಸುಗಗಿಲ್ಲ; ಕೊಕಲಸಂಗ ಹಳೆಯ (29) ಸಾಧಕರಾದ ನಮ್ಮ ಕರ್ಮವು ಅತ್ಯತಿಷ್ಠದಳಾಂಗುಲದಿಂದತ್ತತ್ತಲೇ (31) ಬತ್ವತ್ತಿ, ಸ್ಥಿತಿ, ಪ್ರಳಯಕ್ಕೆ ಹೊರಗಾದ ಕೂಡಲಸಂಗಮ ದೇವಂಗೆ ವಂತಾತಿತರುಗಳ್ಳುಳ್ಳಡೆ ಹೇಳಿರೋ! (32) ಲಿಂಗತತ್ತ್ವವೇ ಪರಮಾವಧಿ ದೈವವಾಗಿದೆ. ವೇದವೂ ಕೂಡ ಕೂಡಲಸಂಗಮ ದೇವನೊಬ್ಬನೇ 'ದೇವ' ಎಂದು ಒಪ್ಪಿಕೊಂಡಿದೆ (33) ದೃಷ್ಟಿ ನಿಗ್ರಹ, ಶಿಷ್ಟ ಪರಿಪಾಲಕ ನಮ್ಮ ಕೂಡಲಸಂಗಮದೇವ (3) ಕೂಡಲಸಂಗಮದೇವನು ದಕ್ಷಯಜ್ಞವನ್ನು ಕೆಡಸಿದವನು (35) ಎಲ್ಲ ದೇವರುಗಳು ಕೂಡಲಸಂಗಯ್ಯ ನಿಧಿ ಮೊರೆಯಿಡುತ್ತಾರೆ. (36) ಕೂಡಲಸಂಗಮದೇವರಿಗೆ ಎಲ್ಲಾ ದೇವರುಗಳೂ ಅಳೆಂಬುದನರಿಯಬೇಕು (37) ಕೂಡಲ ಸಂಗಯ್ಯನೊಬ್ಬನೇ ಸತ್ಯ, ಎಳಿಗೆಲ್ಲ ದೈವವು ಅನಿತ್ಯ (38) ಎಲ್ಲಾ ದೇವತೆಗಳನ್ನು ಮರೆಯಬಹುದು, ಆದರೆ ಕೂಡಲಸಂಗನ ಮರೆಯಲಾಗದು (39) ಕೂಡಲಸಂಗನನ್ನು ಬಿಟ್ಟು ಅನ್ಯ ದೈವಕ್ಕೆರಗಿದಡೆ ಅದು ಪೊಳ್ಳುಕುಟ್ಟಿ ಡೈ ಹೊಟ್ಟೆಯೊದಂತೆ ಆಗುತ್ತದೆ. (40) ಲೋಗರ ಬೇಡಿಕೊಂಡುಂಬ ದೈವಂಗಳು, ತಾವೇನು ಕೊಡುವುವು ಕೂಡಲ ಸಂಗಮದೇವಾ! (41) ಹೇಪಿ ದೈವಂಗಳ ಬೇಡಿಬೇಡಿ ನಿರರ್ಥಕೆಡಬೇಕು, ಎಲ್ಲವೋ ಕೂಡಲಸಂಗಮ ದೇವನ ನೆರೆನಂಬೊದ್ಯೆದೋ (ಇದು ಮೊಕ್ಷದ ವಿಚಾರವಾಗಿದೆ) (42) ಸಹಜ ಭಾವ, ನಿಜೈಕ್ಯಕೂಡಲಸಂಗಮದೇವನೊಬ್ಬನೇ ದೇವಾ (43) ಈವಡೆಕಾನಡೆ ನಮ್ಮ ಕೂಡಲಸಂಗಮದೇವನಲ್ಲದೆ ಮತ್ತೊಂದು ದೈವವಿಲ್ಲ (44) ಕೂಡಲಸಂಗಮ ದೇವನಲ್ಲದೆ ಪರದೈವಂಗಲು ಮನಕ್ಕೆ ಬಂದುದೆ! ಬಿಕ್ಕನೆ ಬಿರಿದ ದೈವಂಗಳು (45) ಬರಿಯ ಪತ್ರೆತಂದು ಮೆರಯದೆ ಪೂಜೆಸುನಮ್ಮ ಕೂಡಲಸಂಗನ (46)

ದೈವದೈವವೆಂದು ಕಾಲಿಡಲಿಂಬಿಲ್ಲ. ದೈವನೊಬ್ಬನೆ ಕೂಡಲ ಸಂಗಮದೇವಾ (47) ಅನ್ಯ ದೈವವೆಂಬುದ ತೋರಿಯು ಕಾಣಬಾರದು. ನೊಸಲಕಣ್ಣ ಅವನೊಬ್ಬನೆ ದೈವಕೂಡಲಸಂಗಮ ದೇವಾ (48) ಅನ್ಯದೈವದ ಪೂಜೆ ಹೇಗೆಂದರೆ ತುಡುಗಣಿ ನಾಯನ್ನು ತಂದು ಸಾಕಿದರೆ ಅದು ತನ್ನ ಒಡೆಯನನ್ನೇ ಬೊಗಳುವುದು. ಹಾಗೆ, ಆದ್ದರಿಂದ ಕೂಡಲಸಂಗಮದೇವನನ್ನು ಪೂಜಿಸಬೇಕು (49) ವರಗುರು ವಿಶ್ವಕ್ಕೆಲ್ಲ ಗಿರಿಜಾ ಮನೋವಲ್ಲಭ ಪರಮಕಾರಣಿಕ ಕೂಡಲಸಂಗಮದೇವ (50) ಈ ರೀತಿಯಲ್ಲಿ ಸಾಧಕನು 'ದೇವಪೂಜೆಯ ಸಮಯದಲ್ಲಿ' ತನ್ನ ಮನೋಧರ್ಮಗಳನ್ನು ಬೆಳೆಸಿಕೊಳ್ಳಬೇಕು. ಇದೇ ದೇವ ಪೂಜೆಯ ಮಾಟವಾಗುತ್ತದೆ. ಅಂದರೆ ದೇವ (ಶಿವ) ಪೂಜೆಯ ರೀತಿಯಾಗಿದೆ. ಇವು ಅನುಭಾವಾತ್ಮಕ ನೆಲೆಯ ಮಾತುಗಳಾದರೆ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಶಾಸ್ತ್ರ ಸ್ವರೂಪದಲ್ಲಿ ದೇವಪೂಜೆಯನ್ನು ಮಾಡುವ ವಿಚಾರಗಳನ್ನು ಕ್ರಿಯಾಗಮಸ್ಥಲ, 54ನೆಯ ಸ್ಥಲ: 10 ಶ್ಲೋಕಗಳು) ಭಾವಾಗಮ ಸ್ಥಲ (55ನೆಯ ಸ್ಥಲ 9 ಶ್ಲೋಕಗಳ ಮತ್ತು ಜ್ಞಾನಗಮ ಸ್ಥಲ) (56ನೆಯ ಸ್ಥಲದಲ್ಲಿ 11 ಶ್ಲೋಕಗಳು) ಒಟ್ಟು 30 ಶ್ಲೋಕಗಳಲ್ಲಿ ಪ್ರತಿಪಾದಿತವಾಗಿದೆ. ಇವನ್ನು ಇಲ್ಲಿ ನಿರೂಪಿಸಲಾಗಿದ್ದರು. 'ಪರಮನು' ಸಾಕ್ಷಾತ್ ಶಿವನೇ ಆಗಿದ್ದಾನೆ. ಆ ಶಿವನ ಪೂಜೆಯೇ ಕ್ರಿಯೆ ಎನಿಸಿಕೊಳ್ಳುವುದು. ಅಂತಹ ಕ್ರಿಯೆಯನ್ನು ಹೇಳುವ ಆಗದುಗಳೇ ಕ್ರಿಯಾಗಮಗಳೆಂದು ಹೇಳಲ್ಪಟ್ಟಿರುವವು (16–51) ಅರಣಿ ಮಂಥನವನ್ನು ಮಾಡದೆ (ಕಟ್ಟಿಗೆಯ ಗುಳಿಯಲ್ಲಿ ಕೊರಡನಿಟ್ಟು ಮಂಥನಮಾಡದೆ) ಅಗ್ನಿಯು ಹೇಗೆ ಪ್ರಕಟವಾಗುವುದಿಲ್ಲವೋ, ಅದರಂತೆ ಶಿವಪೂಜಾ ರೂಪವಾದ ಕ್ರಿಯೆಯನ್ನು ಮಾಡಲಾರದೆ ಅಂತರಂಗದಲ್ಲಿಯ ಶಿವನು ಪ್ರಕಾಶಿಸಲಾರನು. ಸಿ.ಶಿ.(16–6) ವಿಧಿಯು ಲೋಪವಾಗದ ಹಾಗೆ, ಶಿವನು ಪ್ರಸನ್ನ ವಜವ ಹಾಗೆ, ಆಗಮ ಶಾಸ್ತ್ರ ಪ್ರಮಾಣದಂತೆ, ಶಿವಪೂಜಾ ರೂಪವಾದ ಕರ್ಮವನ್ನು ಆಚರಿಸಬೇಕು. ಸಿ.ಶಿ. (16–7) "ಬಸವಣ್ಣನವರು ಈ ಶ್ಲೋಕ ಪ್ರಮೇಯದ ಪ್ರಕಾರ ತಮ್ಮ ಇಷ್ಟಲಿಂಗಾರ್ಚನೆಯನ್ನು "ಅಷ್ಟಿವೀರ್ಚನೆ ಷೋಡಷೋಪಚಾರಗಳ ವಿಧಿಗಳಂತೆ, ತಮ್ಮ ದೇವ ಪೂಜೆಯನ್ನು ಮಾಡಬೇಕಾದ ರೀತಿಯಲ್ಲಿ (ಮಾಟದಲ್ಲಿ) ಮಾಡಿದ್ದಾರೆ. (ಇದಕ್ಕೆ ಬಸವಣ್ಣನವರ ವಚನಗಳು ಆಧಾರವಾಗಿದೆ. (1), ಎನ್ನಿಷ್ಟಲಿಂಗಕ್ಕೆ ಅಷ್ಟನಿಧಾರ್ಚನೆ ಷೋಡಶೋಪಚಾರಗಳ ಮಾಡುವೆನು. ಅವಾವುವಯ್ಯಾ ಎಂದೆಡೆ: "(2) ಅಷ್ಟ ವಿಧಾರ್ಚನ ಷೋಡಶೋಪಚಾರವಲ್ಲದೆ ನಿಮ್ಮ ಮುಟ್ಟುಲರಿಯದರ ಕಂಡಡೆ ಅಯ್ಯ ಎಂತೊಂಬೆನವರು? "(3)" ಅಷ್ಟವಿಧಾರ್ಚನೆ ಷೋಡಶೋಪಚಾರವ ಲಿಂಗಂದಿನ ಕೃತ್ಯವ ಅಂಜಂದಿಗೆ ಅನು ಮಾಡಿ ಶುದ್ಧನಯ್ಯಾ' (4) "ಅಷ್ಟವಿಧಾರ್ಚನೆ ಷೋಡಶೋಪಚಾರದ ಮಾಡುವ ಹಮ್ಮಿನಲ್ಲಿ ಬೆಂದೆನೆಯ್ಯಾ" (5) "ಅಷ್ಟವಿಧಾರ್ಚನೆ ಷೋಡಶೋಪಚಾರಗಳನು ಅರಸರಿಯದ ಬಟ್ಟಿ ಮಾಡುವೆನು "(6) ಅಷ್ಟವಿಧಾರ್ಚನೆಯ ಮಾಡುವುದು, ಮಾಡಿದ ಪೂಜೆಯ ನೋಡುವುದು, ಶಿವತತ್ತ್ವ ಗೀತವ ಪಾಡುವುದು. ಶಿವನ ಮುಂದೆ ನಲಿದಾಡುವುದು. ಭಕ್ತ ಜ್ಞಾನ ಸಂಭಾಷಣೆಯ ಮಾಡುವುದು; ಕೂಡಲ ಸಂಗನ ಕೂಡುವುದು." ಮಹಾಲಿಂಗದೇವರ ಏಕೋತ್ತರಗತಸ್ಥಲ ಗ್ರಂಥದಲ್ಲಿ ಈ ಕ್ರಿಯಾಗಮ ಸ್ಥಲಕ್ಕೆ ಸುಮಾರು 14 ವಚನಗಳನ್ನು; ಹಾಗೂ 1 ಪದಮವನ್ನು ಬಸವಾದಿ ಶರಣದ ವಚನಗಳಿಂದ ಆಯ್ದು ಅನ್ವಯಮಾಡಿದ್ದಾರೆ. 'ಇನ್ನೂ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಮುಂದುವರೆದಂತೆ "ವಿಧಿಯೆಂದರೆ ಶಾಸನವೆಂದರ್ಥ ಆದ್ದರಿಂದ ವಿಚಕ್ಷಣನಾದವನು ಶಿವಾರಾಧನ ಬುದ್ಧಿಯಿಂದಲೇ ವಿಹಿತನಾದ ಕರ್ಮಗಳನ್ನು ಆಚರಿಸಬೇಕು ಸಿ.ಶಿ. (16–8) ಶ್ರೀ ಗುರುವಿನ ಆ ದೇಶವನ್ನು ಪಡೆದುಕೊಂಡೆ ಪರಮೇಶ್ವರನನ್ನು ಪೂಜಿಸಬೇಕು. ಆ ಪರಮೇಶ್ವರನು ಪೂಜಿಸಲ್ಪಡಲು ಎಲ್ಲ ದೇವತೆಗಳೂ ಪೂಜಿಸಿದಂತೆ ಆಗುತ್ತಾರೆ. ಸಿ.ಶಿ.(16–9) ಯಾವಾಗಲೂ ಶಿವಾರ್ಚನೆಗೆ ಸಾಧನಗಳಾದ ಸಾಮಗ್ರಿಗಳನ್ನು ಸಂಪಾದಿಸುವುದರಲ್ಲಿಯೇ ತೊಡಗಿದ ಮನಸ್ಸುಳ್ಳ ಮತ್ತು ಶಿವಯೋಗದಲ್ಲಿಯೇ ರತನಾದ ಯೋಗಿಯು ಮುಕ್ತನಾಗುತ್ತಾನೆ. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ. ಸಿ.ಶಿ.(16–10). ಜ್ಞಾನ ಕರ್ಮಗಳು (ಶಿವಷ್ಟೃತ ಜ್ಞಾನ ಮತ್ತು ಶಿವಪೂಜಾರೂಪವಾದ ಕರ್ಮಗಳು) ಕುರುಡ ಹಾಗೂ ಕುಂಟರಂತೆ

ಪರಸ್ಪರ ಸಾಪೇಕ್ಷಗಳಾಗಿರುತ್ತವೆ. ಆದ್ದರಿಂದ ಫಲಗಳಲ್ಲಿ (ಪರಾ ಮತ್ತು ಅಪರಾ ಮುಕ್ತಿ ರೂಪವಾದ ಫಲಗಳಲ್ಲಿ) ವಿರಕ್ತನಾಗಿ ಸಾಧಕನು ಜ್ಞಾನಕರ್ಮಗಳೆರಡನ್ನೂ ಆಚರಿಸಬೇಕು. ಸಿ.ಶಿ.(16–11) ಜ್ಞಾನಿಗಳು ಶಿವಪೂಜಾ ರೂಪವಾದ ಕರ್ಮವೂ ಸಹ ವಿಧಿಸಲ್ಪಡುತ್ತದೆ. ಆದ್ದರಿಂದ, ಶಿವಪೂಜಾ ರೂಪವಾದ ಕರ್ಮವನ್ನು ತ್ಯಜಿಸಕೂಡದು. ಸಿ.ಶಿ.(16–12) ಈ ರೀತಿಯ ಕರ್ಮ ಅಥವಾ ಕ್ರಿಯೆ ಮಾಡುವುದರಿಂದ ಸಾದಕನ ಪ್ರಯತ್ನದ ಗುಣಮಟ್ಟ ಹೆಚ್ಚುತ್ತಾ ಹೆಚ್ಚುತ್ತಾ ಹೋಗಿ, ಬೇಗನೆ ಲಿಂಗತತ್ತ್ವದ ಫಲ ಸಿದ್ಧಿಯು ಆಗುತ್ತದೆ. ಈ ತತ್ತ್ವದ ಹಿನ್ನೆಲೆಯಲ್ಲಿಯೇ ಗೀತೆಯಲ್ಲಿ ನಿಷ್ಕಾಮ ಕರ್ಮವನ್ನು 'ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ' ಕಾಮ ವಿನಿರ್ಮುಕ್ತತೆ'ಯನ್ನು ವಿಧಿಸಲ್ಪಟ್ಟಿದೆ. ಇವೆರಡೂ ಸಹ ಫಲಗಳಲ್ಲಿ ಆಸಕ್ತಿಯಿಲ್ಲದ ಕ್ರಿಯೆಗಳಲ್ಲಿಯೇ ಆಧ್ಯಾತ್ಮ ಜೀವಿಯು ತೊಡಗಿಕೊಳ್ಳಬೇಕೆಂದು ಪ್ರತಿಪಾದಿಸುತ್ತವೆ. "ಎಲ್ಲರಿಗೂ ಆಚರವೇ ಅಲಂಕಾರವೆಂದು ಪ್ರತಿಪಾದಿಸುತ್ತವೆ. "ಎಲ್ಲರಿಗೂ ಆಚರವೇ ಅಲಂಕಾರವೆಂದು ಹೇಳಲ್ಪಟ್ಟಿದೆ. ಆದ್ದರಿಂದ ಈ ಲೋಕದಲ್ಲಿ ಆಚಾರ ಹೀನವಾದ ಮನುಷ್ಯನು ನಿಂದಿತನಾಗುತ್ತಾನೆ. ಸಿ.ಶಿ. (16–13) ಸದಾಚಾರಯುಕ್ತವಾದ ಜ್ಞಾನದಿಂದಲೇ ಮಹೇಶ್ವರನಾದ ಶಿವನು ಪ್ರಸನ್ನನಾಗುತ್ತಾನೆ. ಆದ್ದರಿಂದ ಜ್ಞಾನಿಯಾದವನು ದೇಹಪತನವಾಗುವವರೆವಿಗೆ (ಮರಣ ಪರ್ಯಂತವಾಗಿ) ಆಚಾರವಂತನಾಗಿಯೇ ಇರಬೇಕು. ಸಿ.ಶಿ.(16–14)". ಹೀಗೆ ಕ್ರಿಯಾಗಮಸ್ಥಲದಲ್ಲಿ ಹತ್ತು ಪ್ರಮೇಯಗಳ ಸ್ವರೂಪ ಶ್ಲೋಕಗಳ ಮೂಲಕ ಲಿಂಗಾರ್ಚನೆಯ ವಿಚಾರದಲ್ಲಿ ಸಾಧಕನ ಸ್ಥೂಲ ದೇಹ ಪರವಾದ "ವಿಧಿ ಪ್ರಕಾರ"ದ ಆಚರಣೆಗಳನ್ನು ಪ್ರತಿಪಾದಿಸುತ್ತದೆ. ಇದೇ ರೀತಿಯಲ್ಲಿ ಸಾಧಕನ ಪರವಾದ "ಸೂಕ್ಷ್ಮ ಶರೀರದ" ಸ್ವರೂಪದಲ್ಲಿ ಆಚರಿಸಬೇಕಾದ ಕ್ರಿಯೆಗಳನ್ನು "ಭಾವಾಗಮ ಸ್ಥಲದ್ದಲಿ" 9 ಶ್ಲೋಕ ಸ್ವರೂಪ ಪ್ರಮೇಯಗಳಾಗಿ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ನಿರೂಪಿಸಲಾಗಿದೆ. "ವೈರಿಂಗ್ಯ ಸಂಪನ್ನನಾದ ಯೋಗಿಗೆ ಯಾವ ಭಾವ ಚಿನ್ಹೆಗಳುಂಬೋ (ಪರಿಪೂರ್ಣವಾದ ಶಿವಸ್ವರೂಪವಾದ ಅವನ ಮನಸ್ಸಿನ ಲಕ್ಷಣಗಳುಂಟೋ) ಅವುಗಳೇ ಎಲ್ಲ ಜೀವಿಗಳಿಗೆ ಭಾವಾಗಮವೆಂದು ಹೇಳಲ್ಪಡುತ್ತದೆ. ಅ.ಶಿ. (16–15). 'ಶಿವೋಹಂ' (ಶಿವವೇನಾನೆಂಬ) ಎಂಬ ಭಾವವೇ 'ಶಿವತ್ವ' ಪ್ರಾಪ್ತಿಗೆ ಕಾರಣವಾಗಿರುತ್ತದೆ. ಆದರೆ ಕೇವಲ ಶಿವಜ್ಞಾನವೇ ಆಗಲಿ, ಕೇವಲ ಶಿವ ಪೂಜಾರೂಪವಾದ ಆಚಾರವೇ ಆಗಲಿ 'ಶಿವತ್ವ'ವನ್ನು ಪ್ರಾಪ್ತ ಮಾಡಿಕೊಡಲಾರವು. ಆದ್ದರಿಂದ ಭಾವಯುಕ್ತನಾಗಿಯೇ (ಧ್ಯಾನಯುಕ್ತನಾಗಿಯೇ) ಶಿವನಾಗಬೇಕು (ಜ್ಞಾನ ಮತ್ತು ಆಚಾರಗಳನ್ನು ಭಾವಯುಕ್ತವಾಗಿಯೇ ಮಾಡಬೇಕೆಂಬುದೇ ತಾತ್ಪರ್ಯ) ಸಿ.ಶಿ.(16–16) ವಸ್ತುವಿನ ಸ್ವರೂಪವನ್ನು ನಿರ್ಣಯಿಸುವುದೇ ಜ್ಞಾನವು. ತದ್ಭಾವಕ್ಕೆ (ಅದೇ ಆಗಲಿಕ್ಕೆ) ಧ್ಯಾನವು ಕಾರಣ. ಆದ್ದರಿಂದ ಮಹಾದೇವನನ್ನು "ತಿಳಿದುಕೊಂಡ ಜ್ಞಾನಿಯು ಧ್ಯಾನಯುಕ್ತನಾಗಿಯೇ ಇರಬೇಕು. ಸಿ.ಶಿ.(16–17). ಈ ರೀತಿಯ 'ತದ್ಭಾವ ಧ್ಯಾನದ "ಆಚರಣತೆಯ ಪ್ರಯತ್ನಗಳ ಆಚರ ಸಿದ್ಧಿಗಾಗಿ, ಸಾಹಿತ್ಯ, ಸಂಗೀತ, ನೃತ್ಯ ಮತ್ತು ಚಿತ್ರಕಲೆ ಮುಂತಾದ ಲಲಿತಕಲೆಗಳಲ್ಲಿ ಯಾವುದಾದರೊಂದರಲ್ಲಿ ಸಾಧಕನು ಮೊದಲು ಮನಸ್ಸನ್ನು ಪಳಗಿಸಿಕೊಳ್ಳಬಹುದು. ಹೀಗೆ ಮಾಡಿದಾಗ ಸಾಧಕನಿಗೆ ಇಂತಹ ಮಹಾದೇವನನ್ನು ತಿಳಿದುಕೊಳ್ಳಲು, ಧ್ಯಾನಮಾಡಲು ಸಾಧ್ಯವಾಗುತ್ತದೆ. ಇಂತಹ ಒಂದು ಪಳಗುವಿಕೆಯ ಮನಸ್ಸನ್ನು ಪಡೆಯಲು ಸಾಧಕನು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಪ್ರತಿಪಾದಿತವಾಗಿರುವ ಕಾವ್ಯಮಯ ಸಾಹಿತ್ಯಿಕ ವಿವರಣೆಗಳು ಪ್ರಮುಖವಾಗುತ್ತದೆ. ಅದೇ ರೀತಿಯಲ್ಲಿ ವಚನಗಳ ಅಧ್ಯಯನವೂ ಸಹ ಸಾಧಕನಿಗೆ ಭಾವನಾಮಯವಾದ ಮನಸ್ಸನ್ನು ಉಂಟುಮಾಡಿಕೊಡುತ್ತದೆ. ಕಾರಣ ವಚನಗಳು ಲಿಂಗತತ್ತ್ವ ಹಿನ್ನೆಲೆಯಲಿ ಲಿಂಗತತ್ತ್ವ ಸಾಧನೆಯ ವಿಚಾರಗಳನ್ನು ಹಾಗೂ ಲಿಂಗತತ್ತ್ವದ ಹಿನ್ನೆಲೆಯಲ್ಲಿ ಸಾಮಾಜಿಕ ನ್ಯಾಯಗಳನ್ನು ಪ್ರತಿಪಾದಿಸಿದರೂ ಸಹ ಅದು 'ಕಾವ್ಯ'ಮಯವಾಗಿ 'ಸಾಹಿತ್ಯ' ಸ್ವರೂಪದಲ್ಲಿದೆ. ಆದ್ದರಿಂದ ಸಾಹಿತ್ಯಾತ್ಮಕವಾದ ಆಧ್ಯಾತ್ಮಿಕತೆಯನ್ನು ಹೊಂದಿರುವ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದ ಅಧ್ಯಯನವಾಗಲಿ (ಶಾಸ್ತ್ರವಾಗಲಿ) ಅಥವಾ ಬಸವಾದಿ ಶರಣರ ವಚನಗಳ ವಾಙ್ಮಯಗಳಾಗಲಿ ಸಾಧಕನಿಗೆ "ಧ್ಯಾನ"ಯುಕ್ತವಾದ "ಭಾವನಾ"ಯುಕ್ತವಾದ ಮನಸ್ಸನ್ನು

ಕೊಡಲು ಅನುಕೂಲ ಮಾಡಿಕೊಡುತ್ತದೆ. "ಪಂಡಿತೋತ್ತಮನು (ಶಿವಾಗಮ ಶಾಸ್ತ್ರಕುಶಲನಾದ ಯೋಗಿಯು) ಪರಮಾನಂದದ ಪ್ರಾಪ್ತಿಗಾಗಿ ಮಹೇಶ್ವರನನ್ನು ತನ್ನ ಒಳಗೂ ಮತ್ತು ಹೊರಗೂ ಪರಿಪೂರ್ಣವಾಗಿರುವನೆಂದು ಭಾವಿಸಬೇಕು. (ಧ್ಯಾನಿಸಬೇಕು) ಸಿ.ಶಿ. (16–18). ಅರ್ಥ ಹೀನವಾದ ವಾಣಿ (ಮಾತು) ಪತಿ ಇಲ್ಲದ ಸತಿ, ಶಾಸ್ತ್ರ ಸಮ್ಮತವಲ್ಲದ ಜ್ಞಾನ, ಇವೆಲ್ಲವುಗಳು ಹೇಗೆ ವ್ಯರ್ಥಗಳಾಗಿರುತ್ತವೆಯೋ ಅದರಂತೆ ಭಾವಹೀನವಾದ ಕ್ರಿಯೆಯೂ ಸಹ ವ್ಯರ್ಥವಾಗಿರುತ್ತದೆ. ಸಿ.ಶಿ. (16–19) ಕಣ್ಣಿಲ್ಲದ ವ್ಯಕ್ತಿಯು ರೂಪವನ್ನು ನೋಡುವುದಕ್ಕೆ ಹೇಗೆ ಸ್ವಲ್ಪವೂ ಸಮರ್ಥನಲ್ಲವೋ, ಅದರಂತೆ ಭಾವಹೀನವಾದ ಯೋಗಿಯು ಶಿವನನ್ನು ಕಾಣಲು ಸ್ವಲ್ಪವೂ ಸಮರ್ಥನಾಗುವುದಿಲಲ್ ಸಿ.ಶಿ.(16–20). ಆದ್ದರಿಂದ "ಭಾವ ಶುದ್ಧ"ವಾದ ಮನಸ್ಸಿನಿಂದಲೇ ಪರಮೇಷ್ಠಿಯನ್ನು (ಪರಶಿವನನ್ನು) ಪೂಜಿಸಬೇಕು. ಭಾವಹೀನವಾದ ಪೂಜೆಯು ಮಹತ್ತರದಾಗಿದ್ದರೂ ಶಿವನು ಅದನ್ನು ಸ್ವೀಕರಿಸುವುದಿಲ್ಲ. ಸಿ.ಶಿ.(16–21). ಯಾವ ರೀತಿಯಾಗಿ ಭ್ರಮರದ ಚಿಂತನೆಯಿಂದ ಕೀಟಕ್ಕೆ ಭ್ರಮರ ಭಾವವು ಉಂಟಾಗುವುದೋ, ಅದರಂತೆ ಶಿವನನ್ನು ಕುರಿತು ನಿರಂತರವಾಗಿ ತನ್ನ ಭಾವನೆಯಲ್ಲಿ ಧ್ಯಾನವು ಸಂಪನ್ನವಾಗಲು ಅವನಿಗೆ ಶಿವತ್ವವೇ ಪ್ರಾಪ್ತವಾಗುವುದು ಸಿ.ಶಿ. (16–22). ನಿಷ್ಕಲಂಕನೂ (ನಿರ್ಮಲನೂ) ನಿರಾಕಾರನೂ ಆದ 'ಶಿವ' ಎಂಬ ಹೆಸರಿನ ಪರಬ್ರಹ್ಮವನ್ನು ಧ್ಯಾನಿಸಲು ಅಸಮರ್ಥನಾಗಿದ್ದರೂ ಸಹ ಆ ಪರಶಿವನ ವಿಭೂತಿಯನ್ನು (ಸರ್ವಜ್ಞತ್ವಾ, ನಿತ್ಯತೃಪ್ತತ್ವಾ, ಅನಾದಿಬೋಧತ್ವಾ, ಸ್ವತಂತ್ರತ್ವಾ, ಆಲುಪ್ತ ಶಕ್ತಿತ್ವಾ ಮತ್ತು ಅನಂತಶಕ್ತಿತ್ವಗಳೆಂಬ ಷಡ್ಗುಕೋಶ್ವರ್ಯಗಂಗಳನ್ನು) ಭಾವಿಸಬೇಕು. ಸಿ.ಶಿ. (16–23) * ಇವು ಪರಮಾತ್ಮನ ಷಡ್ಗುಕೋಶ್ವರ್ಯಗಳಾಗಿವೆ. ಹೀಗೆ ಸಾಧಕನು ಭಾವನಾಯುಕ್ತನಾಗಿ ತನ್ನ ಸೂಕ್ಷ್ಮ ಶರೀರದ 'ಮೂಲಕ ಶಿವಪೂಜಾದಿ ಕ್ರಿಯೆಗಳನ್ನು ಆಚರಿಸಿದರೆ, ತನ್ನ "ಕಾರಣ ಶರೀರ'ದ ಮೂಲಕವೂ ಸಹ ಆ ಕ್ರಿಯೆಗಳನ್ನು ಆಚರಿಸಬೇಕಾಗುತ್ತದೆ." ಈ ವಿಚಾರಗಳನ್ನೆ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ "ಜ್ಞಾನಾಗಮಸ್ಥಲ'ದಲ್ಲಿ 11 ಶ್ಲೋಕ ಸ್ವರೂಪ ಪ್ರಮೇಯಗಳಲ್ಲಿ ಪ್ರತಿಪಾದಿಸಿದೆ. "ಭಾವಾಗಮ ಸ್ಥಲದ ಪರಮ ಯೋಗಿಶ್ವರನ ಯಾವ "ಜ್ಞಾನ ಚಿನ್ಹೆ"ಗಳಿವೆಯೋ ಅವುಗಳೇ ಶರೀರಗಳಿಗೆ (ಲೋಕದ ಜೀವಿಗಳಿಗ) ಮುಕ್ತಿಗೆ ಜ್ಞಾನಾಗಮಗಳಾದಿ ಪ್ರವರ್ತಿಸುತ್ತವೆ. ಸಿ.ಶಿ. (16–24) ಪುರುಷರಿಗೆ (ಮನುಷ್ಯರಿಗೆ) ಕೇವಲ ಕರ್ಮದಿಂದಲೇ ಆಗಲಿ ಅಥವಾ ಕೇವಲ ಭಾವದಿಂದಲೇ ಆಗಲಿ ಏನು ಪ್ರಯೋಜನ? ಏಕೆಂದರೆ 'ಭಾವ ಕರ್ಮಗಳಿಂದ ಕೂಡಿದ' 'ಜ್ಞಾನ'ವೇ ಮುಕ್ತಿಯನ್ನು ಕೊಡುವುದು. ಸಿ.ಶಿ. (16–25). ಕೇವಾ ಕರ್ಮವೊಂದನ್ನೆ ಆಚರಿಸುತ್ತಾ ಒಂದು ನೂರು ಕೋಟಿ ಜನ್ಮಗಳನ್ನು ಕಳೆದರೂ ಸಹ ಜೀವಿಗಳಿಗೆ ಮುಕ್ತಿಯು ದೊರೆಯುವುದಿಲ್ಲ. ಮುಕ್ತಿಗೆ ಜ್ಞಾನವು ಕಾರಣವಾಗಿರುತ್ತದೆ ಸಿ.ಶಿ.(16–26) ಜ್ಞಾನಹೀನವಾದ ಕೇವಲ ಕರ್ಮವನ್ನೇ ಆಚರಿಸುವುದರಿಂದ ಅದು ಜೀವಿಗಳ ಸಂಸಾರ ಬಂಧನಕ್ಕೆ ಕಾರಣವಾಗುವುದು. ಆ ಕರ್ಮವೇ "ಜ್ಞಾನ"ದಿಂದ ಕೂಡಿ ಆಚರಿಸಲ್ಪಟ್ಟಾಗ ಜೀವಿಗಳ ಸಂಸಾರ ಬಂಧನವನ್ನು ನಿವೃತ್ತಿಗೊಳಿಸುವುದು. ಸಿ.ಶಿ. (16–27). ಕೇವಲ ಕರ್ಮವನ್ನು ಆಚರಿಸುವ ಜೀವಿಗಳಿಗೆ ನಶ್ವರಗಳಾದ ಸ್ವರ್ಗಾದಿ ಫಲಗಳೇ ದೊರೆಯುವುವು. ಆದ್ದರಿಂದ "ಸ್ಥಿರ"ವಾದ ಮುಕ್ತಿ ಫಲವನ್ನು ಪ್ರಾಪ್ತಿ ಮಾಡಿಕೊಳ್ಳಲು ಜ್ಞಾನವನ್ನೇ ಚೆನ್ನಾಗಿ ಅಭ್ಯಾಸ ಮಾಡಬೇಕು. ಸಿ.ಶಿ. (16–28). ಶಾಸ್ತ್ರಗಳ (ವೇದಾಗಮಗಳಲ್ಲಿ ಪ್ರಸಿದ್ಧವಾದ ವೀರಶೈವ ಶಾಸ್ತ್ರಗಳ) ಅಭ್ಯಾಸವೇ ಮೊದಲಾದ ಪ್ರಯತ್ನಗಳಿಂದ ಮತ್ತು ಸದ್ಗುರುವಿನ ಉಪದೇಶದಿಂದ "ಜ್ಞಾನ"ವನ್ನೆ ಅಭ್ಯಸಿಸಬೇಕು. ಉಳಿದ ಶಾಸ್ತ್ರಗಳಿಂದ ಏನು ಪ್ರಯೋಜನ? (16–29) ಪರಮಶಿವಧ್ವೈತದಲ್ಲಿಯ ಪರಿಪಕ್ವವಾದ "ನಿಶ್ಚಯವೇ" "ಜ್ಞಾನವು". ಇಂತಹ "ಜ್ಞಾನ"ದಿಂದಲೇ ಸತ್ಪುರುಷರಿಗೆ ಸಂಸಾರ ಬಂಧನದ ನಿವೃತ್ತಿ ಉಂಟಾಗುವುದು. ಸಿ.ಶಿ. (16–30). ಈ ಕಾಣುವ ಜಗತ್ತೆಲ್ಲವೂ ಶಿವಾತ್ಮಕವೇ ಆಗಿದೆ. ಇಲ್ಲಿ ಶಿವನಿಗೆ ಅನ್ಯವಾದದ್ದು ಬೇರಾವುದೂ ಇರುವುದಿಲ್ಲ. ನಾನೂ ಸಹ ಶಿವನೇ ಆಗಿದ್ದೇನೆ ಎನ್ನುವಂತಹ ಬುದ್ಧಿಯೇ (ತಿಳುವಳಿಕೆಯೇ) ಉತ್ತಮನಾದ 'ಜ್ಞಾನ'ವೆಂದು ಕರೆಯಲ್ಪಡುವುದು. ಸಿ.ಶಿ. (16–31) ಅಂಧವಾದ ಮನುಷ್ಯನು ತನ್ನ ಎದುರಿಗಿರುವ ವಸ್ತುಗಳನ್ನ ಹೇಗೆ

ನೋಡಲಾರನೋ ಅದರಂತೆಯೇ ಜ್ಞಾನ ಹೀನವಾದ ಜೀವಿಯು ತನ್ನೊಳಗಿರುವ ಶಿವನನ್ನು ನೋಡಲಾರನು. ಸಿ.ಶಿ. (16–32) ಪುರುಷರಿಗೆ (ಜೀವಿಗಳಿಗೆ) ಶಿವ ದರ್ಶನದಿಂದಲೇ ಜನ್ಮರೋಗವು (ಜನನ–ಮರಣ ರೂಪವಾದ ಸಂಸಾರ ಬಂಧನವು) ನಿವೃತ್ತಿಯಾಗುವುದು. ಈ ಶಿವ ದರ್ಶನವು ಜ್ಞಾನ ಚಕ್ಷುಗಳಿಗೆ ಸುಲಭವಾದದ್ದೆಂದು ಜ್ಞಾನಿಗಳು ಹೇಳುತ್ತಾರೆ. ಸಿ.ಶಿ. (16–33) ಮನೆಯಲ್ಲಿ ಅಂಧಕಾರವು ದೀಪವಿಲ್ಲದೆ ಹೇಗೆ ತೋರುವುದಿಲ್ಲವೋ, ಅದರಂತೆ ಚಿತ್ರದಲ್ಲಿಯ ಮೋಹವೂ ಸಹ 'ಶಿವಜ್ಞಾನ' ವಿಲ್ಲದೆ ನಿವೃತ್ತಿಯಾಗದು. ಸಿ.ಶಿ. (16–34)". ಈ ರೀತಿಯಲ್ಲಿ "ದೇವ ಪೂಜೆಯ ಮಾಟವನ್ನು" – ಲಿಂಗಾರ್ಚನೆ ಮಾಡುವ ರೀತಿ ನೀತಿಗಳನ್ನು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥವು ಶಾಸ್ತ್ರವಾಗಿಯೂ, ಬಸವಾದಿ ಶರಣರ ವಚನವಾಙ್ಮಯವು ಅನುಭಾವ ಸ್ವರೂಪವಾಗಿಯೂ ಪ್ರತಿಪಾದಿಸುತ್ತದೆ. ಈ ರೀತಿಯಲ್ಲಿ ಸಾಧಕನು ಆಚರಿಸಿದ "ದೇವ ಪೂಜೆಯ ಮಾಟದಿಂದ ಎಲ್ಲ' ದುರಿತ ಬಂಧನಗಳೂ ಇಲ್ಲವಾಗುತ್ತದೆ. ಸಾಧಕನು ನಿರ್ಮಲನಾಗುತ್ತಾನೆ. ಹೀಗೆ 'ದೇವ ಪೂಜೆಯ ಮಾಟ'ದಲ್ಲಿ ತೊಡಗಿಕೊಂಡ ಸಾಧಕನು ತನ್ನ ಲಿಂಗತತ್ತ್ವ ಅದು ಸಂಧಾನದ ಭಾಗವಾಗಿ, (ಸೂತ್ರ–3)ನ್ನು ಅನುಸರಿಸಬೇಕು" ಶಂಭು ನಿಮ್ಮ ನೋಟ ಹಿಂಗದ ಕಣ್ಣೋಟ" ಈ ಸೂತ್ರದ ಅನ್ವಯಗಳೂ 'ದೇವ ಪೂಜೆಯ ಮಾಟ'ದ ಭಾಗವಾಗಿದೆ. ಸಂಪ್ರದಾಯದಲ್ಲಿ (ಆಗಮೋಕ್ತಿಗಳ ಪ್ರಕಾರ ಮೇಲೆ, ಕ್ರಿಯಾಗಮ, ಭಾವಾಗಮ, ಜ್ಞಾನಾಗಮಪ್ರಕಾರ, ಹಾಗೂ ಅನುಭಾವದ ಹಿನ್ನೆಲೆಯಲ್ಲಿ ಪ್ರತಿಪಾದಿಸಿರುವಂತೆ, ಈ ಶಂಭುವಿನ 'ನೋಟ'ವೆಂದರೆ ಇಷ್ಟ ಲಿಂಗದ ದೃಷ್ಟಿ ಯೋಗವೆಂದರ್ಥ ಮಾಡಬೇಕು. ಈ ದೃಷ್ಟಿ ಯೋಗವು ಪ್ರಮುಖವಾದ, ಶಿವಯೋಗ ಪ್ರಕ್ರಿಯೆಗಳ ಮೂರು ಭಾಗಗಳಲ್ಲಿನ, ಒಂದು ಭಾಗವಾಗಿದೆ. ಈ ಮೂರು ಪ್ರಕ್ರಿಯೆಗಳು (1) ಕುಂಡಲಿನಿಯೋಗ, ಷಟ್‌ಚಕ್ರಭೇದ, (2) ತ್ರಾಟಕಯೋಗ, ಅಥವಾ ದೃಷ್ಟಿ ಯೋಗ ಮನಮಹ್ನ ಯೋಗ (3) ಅರ್ಪಣ ವಿಧಾನ ಅಥವಾ ಮಿಶ್ರಾರ್ಪಣ ಪ್ರಕ್ರಿಯೆಗಳಾಗಿವೆ. ಈ ಮೂರು ವಿಚಾರಗಳು ಸಂಪ್ರದಾಯದಲ್ಲಿ ದೇವ ಪೂಜೆಯ ಮಾಟದ (ಶಿವ ಪೂಜೆಯ, ಲಿಂಗಾರ್ಚನೆಯ ಭಾಗವಾಗಿದೆ. ಸಾಧಕನು ತನ್ನ ದಿನ ನಿತ್ಯದ ಪೂಜೆಯ ವೇಳೆಯಲ್ಲಿ (ಬಸವಣ್ಣನವರ ಪ್ರಕಾರ 'ಲಿಂಗದ ಅನುದಿನ ವೇಳೆ' ಸ್ನಾನಾದಿಗಳಾದ ಮೇಲೆ, ಶುದ್ಧಿಗಳಾದ ಮೇಲೆ, 'ಪ್ರಾಣಾಯಾಮಾದಿ'ಗಳನ್ನು ಮಾಡುವಾಗ ಅದರ ಭಾಗವಾಗಿ 'ಕುಂಡಲಿನಿಯೋಗ ಷಟ್ ಚಕ್ರ ಬೇಧ'ವನ್ನು ಮಾಡಬೇಕು. ಆಗ ಮೊದಲಸಾರಿ 'ಅಖಂಡ ಚೈತನ್ಯ'ದ ಪರಿಚಯವಾಗುತ್ತದೆ. ನಂತರದಲ್ಲಿ ಸಾಧಕನು ಅಷ್ಟ ವಿಧಾರ್ಚನೆ, ಷೋಡಶೋಪಾಚಾರಗಳನ್ನು

ಮಾಡಿ, (ಅಷ್ಟ ವಿಧಾರ್ಚನೆ. (1) ಜಲ, (2) ಗಂಧ, (3) ಅಕ್ಷತೆ (4) ಪುಷ್ಪ, (5) ಧೂಪ, (6) ದೀಪ, (7) ನೈವೇಧ್ಯ (8) ತಾಂಬೂಲ (9) ವಿಭೂತಿ ರುದ್ರಾಕ್ಷ ಧವಿಸಬೇಕು.) ಷೋಡಶೋಪಚಾರ (1) ಸುಖತಲ್ಲ (2) ವಸ್ತು (3) ಭರಣ (4) ಲೇಪನ (5) ಛತ್ರ (6) ಚಾಮರ (7) ವ್ಯಜನಂ (8) ದರ್ಪನ (9) ನಾದ (10) ವಾದ್ಯ (11) ನೃತ್ಯಂ (12) ಗೀತಂ (13) ಸ್ತೋತ್ರಂ (14) ಪುಷ್ಪಾಂಜಲಿ (15) ಪ್ರಣಮ್ಯಕಂ (16) ಪ್ರದಕ್ಷಿಣ; ಆಧಾರ ಬಸವಣ್ಣನವರ ವಚನ; "ಎನ್ನಿಷ್ಟ ಲಿಂಗಕ್ಕೆ ಅಷ್ಟ ವಿಧಾರ್ಚನೆ ಷೋಡಶೋಪಚಾರದ ದಳ ಮಾರುವೆನು") ಜಪ ಸಮಯದಲ್ಲಿ 'ಪಂಚಾಕ್ಷರ ಮಹಾಮಂತ್ರ ಜಪದ ಹಿನ್ನೆಲೆಯಲ್ಲಿ 'ಲಿಂಗ ನಿರೀಕ್ಷೆ' ಮಾಡುವ ಕ್ರಮವಿದೆ. ಇದನ್ನೆ ಇಲ್ಲಿ ಬಸವಣ್ಣವನರು 'ಶಂಭು ನಿಮ್ಮನ್ನೋಟ ಹಿಂಗದ ಕಣ್ನೋಟ' ವೆಂದು ಪ್ರತಿಪಾದಿಸಿದ್ದಾರೆ. ಶಂಭನವೆಂದರೆ 'ಶಿವ', ಅದು ಅಜ್ಞಾ ಚಕ್ರದ ಅನುಭಾವವಾಗಿದೆ. ಇಷ್ಟಲಿಂಗ ನಿರೀಕ್ಷೆಯೇ ಶಂಭುವಿನ, ಶಿವನ ನೋಟವಾಗಿದೆ. ಆನೋಟ ಹಿಂಗದ ಕಣ್ನೋಟವಾಗ ಬೇಕಾದರೆ, ದೃಷ್ಟಿಯು ಎರಕಹೊಯ್ದ ಸ್ಥಿತಿಯಲ್ಲಿರುತ್ತದೆ. ಈ ಸ್ಥಿತಿಯನ್ನು ಬಸವಾದಿ ಶರಣರು ಎರಕಹೊಯ್ದು; ಅಥವಾ ಕರಳಬಳ್ಳಿ ಸ್ಥಿತಿಯೆಂದು ಬಣ್ಣಿಸಿದ್ದಾರೆ. ಅದೂ ಅಲ್ಲಿದೆ ಈ ಸ್ಥಿತಿಯಲ್ಲಿ ಸಾಧಕನ ಕಣ್ಣಿಂದ ಅಶ್ರುಭಾಷ್ಪಗಳು; "ಕಡೆಗೋಡಿ"ಯರಿವುದು.

ಈ ರೀತಿಯ ವಿವರಣೆಗಳು ಬಸವಾದಿ ಶರಣರ ಮಾಸನಗಳಲ್ಲಿವೆ. ಇಂತಹ ಸ್ಥಿತಿಯಲ್ಲಿ ಸಾಧಕನು ಏನು ಮಾಡುತ್ತಾನೆ ಏನು ಮಾಡಬೇಕು. ಎಂಬ ವಿಚಾರಗಳಿವೆ. ಈ ವಿಚಾರಗಳ ಹಿನ್ನೆಲೆಯಲ್ಲಿ ಬಸವಣ್ಣನವರ

ಮೂರು ವಚನ ಮತ್ತು ಅಲ್ಲಮಪ್ರಭುಗಳ ಒಂದು ವಚನವನ್ನು ಇಲ್ಲಿ ಪ್ರಸ್ತಾಪ ಮಾಡಲಾಗಿದೆ (1) ಕಂಗಳು ತುಂಬಿದ ಬಳಿಕ ನೋಡಲಿಲ್ಲ. ಕಿವಿಗಳು ತುಂಬಿದ ಬಳಿಕ ಕೇಳಲಿಲ್ಲ. ಕೈಗಳು ತುಂಬಿದ ಬಳಿಕ ಪೂಜಿಸಲಿಲ್ಲ. ಮನ ತುಂಬಿದ ಬಳಿಕ ನೆನೆಯಲಿಲ್ಲ. ಮಹಂತ ಕೂಡಲ ಸಂಗಮದೇವನ. ಬಸವಣ್ಣನರೂ (2) ಕಂಗಳ ಕರುಳಾಗಿ ಎರವಣಿಸಿ ಬಪ್ಪವನು ಬರವನೋಡಾ, ಇರವ ನೋಡಾ, ಪರವನೋಡಾ, ಇಹಪರವನೋಡಾ, ಇಹ ಪರವೊಂದಾದ ಘನವನೋಡಾ, ಕರವಿಟ್ಟು ರೂಪಿನಂತೆ ಕಂಗಳೆರಡು ಹಳಚದೆ ಭುಗಿಲನೆ ನಡೆತಗ ಇಂತಪ್ಪಗರುವ ಪ್ರಭುವ ಕಂಡೆವೈ, ಕೂಡಲಸಂಗಮದೇವಾ." – ಬಸವಣ್ಣನವರು (3) "ಕಂಗಳನೋಟ ಲಿಂಗಕ್ಕೆ ಭಾರ! ಲಿಂಗ ಜೀವಿಗಳ ಕೂಡಿ ನುಡಿವನೆ ಶರಣನು? ನಡೆ ನುಡಿ ಮುಗ್ಧ ನಿಮ್ಮ ಶರಣನು"– ಅಲ್ಲಮ ಪ್ರಭುಗಳು. (4)"ಕಂಗಳ ನೋಟ ಹೃದಯದ ಜ್ಞಾನ! ಮನದಲ್ಲಿ ಮಾತನಾಡುತಿರ್ದೆನಯ್ಯಾ, ಜೇನ ಮಳೆಗಳು ಕರೆದವು. ಅಮೃತ ಕಳೆಗಳು ಸುರಿದವು! ಕೂಡಲ ಸಂಗಮ ದೇವರೆಂಬ ರಸಸಾಗರದೊಳೋಲಾಡುತ್ತಿರ್ದೆನಯ್ಯಾ" – ಬಸವಣ್ಣನವರು. ಈ ನ್ಯಾಯ್ಯಾ ವಚನಗಳು ಶಂಭು ನಿಮ್ಮ ನೋಟ ಹಿಂಗದ ಕಣ್ಬೇಟದ ವಿಚಾರವನ್ನೇ ಪ್ರತಿಪಾದಿಸುತ್ತದೆ. – ಈ ವಿಚಾರಗಳನ್ನು 'ಮನ ಮುಗ್ನ ಯೋಗ'ದ ವಿಚಾರಗಳ ವಿವರಣೆಗಳನ್ನಾಗಿ ತಿಳಿಯಬೇಕು. ಸಾರಾಂಶದಲ್ಲಿ ಈ 'ಮನ ಮಗ್ನ' ಯೋಗ ಪ್ರಕ್ರಿಯೆಗಳು ಹೀಗಿವೆ. ಸಾಧಕನು ಕುಂಡಲಿನಯೋಗ ಷಟ್ ಚಕ್ರ ಭೇದ ಪ್ರಕ್ರಿಯೆಗಳ ಮೂಲಕ ಅಖಂಡ ಚೈತನ್ಯದ ಪರಿಚಯವಾದ ಮೇಲೆ, ಅದೇ ಅಖಂಡ ಚೈತನ್ಯ ಸ್ವರೂಪದ ಪ್ರತೀಕವಾದ ಕುರುಹಾದ ಇಷ್ಟ ಲಿಂಗವನ್ನು ಅಷ್ಟ ವಿಧಾರ್ಚನೆ, ಷೋಡಷೋಪಚಾರಗಳ ಮೂಲಕ ಪೂಜಿಸದ ನಂತರ, ಜಪ ಮಾಡುತ್ತಾ ಇಷ್ಟಲಿಂಗ ನಿರೀಕ್ಷೆಯ ಮುಖಾಂತರ ಸಾಧಕನು ತನ್ನ ಬಹಿರ್ಮುಖವಾದ ಮನಸ್ಸನ್ನು ಅಂತರ್ಮುಖಗೊಳಿಸಬೇಕು. ಅಂತರ್ಮುಖ ಮನಸ್ಸಿನಿಂದ ಪಂಚಾಕ್ಷರ ಜಪವನ್ನು ಮಾಡುತ್ತಾ ತನ್ನ ಮನವನ್ನು ಪ್ರಾಣದಲ್ಲಿನ ಶಕ್ತಿ ವಿಶಿಷ್ಟವಾದ ಚೈತನ್ಯದ ಅರಿವಿನ ಜೊತೆಯಲ್ಲಿ ಸೇರಿಸಲು ಪ್ರಯತ್ನಿಸಬೇಕು. ಈ ಸ್ಥಿತಿಯೇ 'ಜಂಗಮಾರಾಧನೆ'ಯಾಗಿದೆ ಅಥವಾ 'ಜಂಗಮಾರ್ಚನೆ'ಯಾಗಿದೆ. ಇಲ್ಲಿ 'ಜಂಗಮ'ವೆಂದರೆ ಪ್ರಾಣದಲ್ಲಿನ ಶಕ್ತಿ ವಿಶಿಷ್ಟ ಚೈತನ್ಯದ ಅರಿವಾಗಿದೆ. ಇದನ್ನೆ 'ಈಶ್ವರ' ತತ್ತ್ವವೆಂತಲೂ ಬಸವಾದಿ ಶರಣರು ಗ್ರಹಿಸಿ, ಅದನ್ನೆ ತಮ್ಮ ವಚನಗಳಲ್ಲಿ ದಾಖಲಾತಿ ಮಾಡಿದ್ದಾರೆ. 'ಪ್ರಾಣ ಲಿಂಗವೇ ಜಂಗಮ'ವೆಂಬ ವಿಚಾರವನ್ನು ವಚನ (3) 'ಲಿಂಗ ಜಂಗಮ'ವೆಂಬುದೆನೆಗೆ ತೋರಿದವರಾರು' ಎಂಬ ವಚನದಲಿ ಬಸವಣ್ಣನವರು ಪ್ರತಿಪಾದಿಸಿದ್ದಾರೆ. ಹೀಗೆ ಪ್ರಯತ್ನ ಪಡುವಾಗ ಸಾಧಕನ ಮನತತ್ತ್ವವು ಈ ನಾಲ್ಕು ಗುಣಧರ್ಮಗಳನ್ನು ಹೊಂದಿದಾಗ ಮಾತ್ರ ಮನದ ಅರಿವು ಹಾಗೂ ಪ್ರಾಣದ ಅರಿವು ಒಂದೇ ಆಗುತ್ತದೆ. ಕಾರಣ ಈ ಗುಣಧರ್ಮಗಳು ಪ್ರಾಣದ ಗುಣಧರ್ಮಗಳೇ ಆಗಿದೆ. (1) ಶುದ್ಧತೆ: ಶುದ್ಧಾಂತಃಕರಣಗಳು (2) ಕಾಮವಿನಿರ್ಮಗಕ್ತತೆ: (3) ನಿರಹಂಭಾವತೆ, ಹಾಗೂ (4) ನಿಸ್ವಾರ್ಥತೆ. ಇವುಗಳನ್ನು ಸಾಧಿಸಲು ಸಾಧಕನು "ಸತ್ಯಶುದ್ಧ ಕಾಯಕ ದಾಸೋಹ'ಗಳನ್ನು ಮಾಡುತ್ತಾ; ಲಿಂಗತತ್ತ್ವದ ಅನುಸಂಧಾನದಲ್ಲಿ ತೊಡಗಿಕೊಳ್ಳಬೇಕು. ಈ ಪ್ರಕ್ರಿಯೆಗಳಲ್ಲಿ ಸಾಧಕನು ಯಶಸ್ವಿಯಾದರೆ, ಬಸವಾದಿ ಶರಣರು ಅನುಭವಿಸಿದ ಶಿವ–ಪರಶಿವ ಸ್ಥಿತಿಗಳನ್ನು ಯಾರೇ ಬೇಕಾದರೂ ಪಡೆಯಬಹುದಾಗಿದೆ. ಆದರೆ ಈ ಪರಿಣಾಮಗಳ; ಹಂತಹಂತವಾದ ವಿವರಣೆಗಳನ್ನು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಶಾಸ್ತ್ರ ಸ್ವರೂಪವಾಗಿ ಕ್ರಿಯಾ ಲಿಂಗಸ್ಥಲ (48ನೆಯ ಸ್ಥಲ) ಭಾವಲಿಂಗ (49ನೆಯ ಸ್ಥಲ) ಜ್ಞಾನಲಿಂಗ ಸ್ಥಲಗಳಲ್ಲಿ (50ನೆಯ ಸ್ಥಲ) ಪ್ರತಿಪಾದಿಸಲಾಗಿದೆ. (49ನೆ ಸ್ಥಲ) ಜ್ಞಾನಲಿಂಗ ಸ್ಥಲಗಳಲ್ಲಿ (50ನೆಯ ಸ್ಥಲ) ಪ್ರತಿಪಾದಿಸಲಾಗಿದೆ. ಇವುಗಳಲ್ಲಿ ಒಟ್ಟು (7+8+6)=21 ಶ್ಲೋಕಗಳಲ್ಲಿ ಪ್ರತಿಪಾದಿತವಾಗಿದೆ. "ಜ್ಞಾನ ಗುರುವಿನಿಂದ ದೊರೆತ ಅನುಭಾವಾತ್ಮಕ ಜ್ಞಾನ ಸಂಬಂಧದಿಂದ ಯಾವ ಲಿಂಗದಲ್ಲಿ ಎಲ್ಲ ಕ್ರಿಯೆಗಳು ವಿಲಯಗೊಳ್ಳವುದೋ ಆ ಲಿಂಗಕ್ಕೆ ಎಲ್ಲರೂ ಶಿವಾಗಮ ಪಾರಂಗತರಾದವರು 'ಕ್ರಿಯಾಲಿಂಗ'ವೆಂದು ಹೇಳುತ್ತಾ, ಸಿ.ಶಿ. (15–30). ಆ ಪರಾಮಾನಂದ ಸ್ವರೂಪವೂ ಚಿದ್ರೂಪವೂ ಆದ

ಕೇವಲ ಪರಬ್ರಹ್ಮವೇ ವಿಶ್ವದಲ್ಲಿಯ ಎಲ್ಲ ಸತ್ಕ್ರಿಯೆಗಳ ಸಿದ್ಧಿಗಾಗಿ ಸದ್ರೂಪತೆಯನ್ನು ತಾಳಿ, ಇಷ್ಟಲಿಂಗ ರೂಪದಲ್ಲಿ ಕುರುಹಾಗಿ ದೊರೆತಿದೆ. ಸಿ.ಶಿ. (15–31) ಪರಂಜ್ಯೋತಿ ಸ್ವರೂಪವಾದ ಕೇವಲ ಸ್ವರೂಪದ (ಒಂದೇ ಆದ) ಆ ಪರಬ್ರಹ್ಮವೇ ಈ ಲಿಂಗವು (ಇಷ್ಟಲಿಂಗವು). ಆದ್ದರಿಂದ ಈ ಲಿಂಗದ ಪೂಜೆಯಿಂದಲೇ ಎಲ್ಲ ಸತ್ಕರ್ಮಗಳು ಫಲಿಸುವುವು. ಸಿ.ಶಿ. (15–32) ಆದ್ದರಿಂದ ಎಲ್ಲ ಶಿವಯೋಗಿಗಳು ಬೇರೆಲ್ಲಾ ಕ್ರಿಯೆಗಳನ್ನು ತ್ಯಜಿಸಿ, ಶಿವಲಿಂಗ ಪೂಜೆಯಲ್ಲಿಯೊಂದರಲ್ಲಿಯೇ ತತ್ಪರರಾಗಿ ಇರುತ್ತಾರೆ. ಅಂತರೇ ಕ್ರಿಯಾಲಿಂಗವು ಸರ್ವೋತ್ಕೃಷ್ಟವಾಗಿದೆ. ಸಿ.ಶಿ. (15–33). ಯಜ್ಞ ಯಾಗ ಮೊದಲಾದ ಎಲ್ಲ ಕ್ರಿಯೆಗಳು ಈ ಇಷ್ಟಲಿಂಗ ಪೂಜೆಯ ಫಲದ ಒಂದು ಅಂಶಕ್ಕೆ ಸಮನಾಗಿರುತ್ತದೆ. ಈ ರೀತಿಯಾಗಿ ತಿಳಿದುಕೊಂಡು ಶಿವಯೋಗ ಸಿದ್ಧರಿಂದ ಪೂಜೆಗೊಳ್ಳುವ ಯಾವ ಲಿಂಗವಿದೆಯೋ ಅದುವೇ 'ಕ್ರಿಯಾಲಿಂಗ'ವೆಂದು ಹೇಳಲ್ಪಡುತ್ತದೆ. ಸಿ.ಶಿ. (15–34) ಕ್ರಿಯಾಲಿಂಗ ಪೂಜೆಯಲ್ಲಿ ಯಾರಿಗೆ ಆಸಕ್ತಿ ಇದೆಯೋ ಅವನಿಗೆ ಎಲ್ಲ ಸತ್ಕರ್ಮಗಳ ಸಿದ್ಧಿಗಳುಂಟಾಗುತ್ತದೆ. ಆದ್ದರಿಂದ ಅವನಿಗೆ ಎಲ್ಲ ಸತ್ಕರ್ಮಗಳ ಸಿದ್ಧಿಗಳೂ ಉಂಟಾಗುತ್ತದೆ. ಆದ್ದರಿಂದ ಅವನಿಗೆ ಅಗ್ನಿ ಹೋತ್ರಾದಿ ಯಜ್ಞಗಳಿಂದಲೇ ಆಗಲಿ, ಅಸಾಧ್ಯವಾದ ತಪಸ್ಸುಗಳಿಂದಲೇ ಆಗಲಿ ಏನು ಪ್ರಯೋಜನ. (ಅವನಿಗೆ ಯಾವ ಪ್ರಯೋಜನವೂ ಇರುವುದಿಲ್ಲ) ಸಿ.ಶಿ. (15–35). ಜಗತ್ತಿನ ನಿರ್ಮಾಣಾದಿ ತಂತ್ರಗಳಿಗೆ (ಕ್ರಿಯೆಗಳಿಗೆ) 'ಅಧಿಕಾರಿಗಳದ ಬ್ರಹ್ಮ, ವಿಷ್ಣುವೇ ಮೊದಲಾದ ಎಲ್ಲ ದೇವತೆಗಳು ಲಿಂಗವನ್ನೆ ಆಶ್ರಯಿಸಿದವರಾಗಿ (ಲಿಂಗಪೂಜೆಯನ್ನೆ ಮಾಡಿ) ತಮ್ಮ ತಮ್ಮ ಪದಗಳಲ್ಲಿ ಸಿದ್ಧಿಯನ್ನು ಪಡೆದವರಾಗಿರುತ್ತಾರೆ. ಸಿ.ಶಿ. (15–36) "ಇದಿಷ್ಟೂ ಸಾಧಕನ" ಸ್ಥೂಲ ಶರೀರ 'ರೂಪವಾದ' ಕ್ರಿಯಾ ಲಿಂಗ' ಸಾಧನೆಯ ವಿಚಾರವಾದರೆ, ಮುಂದೆ ಸಾಧಕನ 'ಸೂಕ್ಷ ಶರೀರ' ರೂಪವಾದ 'ಭಾವಲಿಂಗ'ದ ಸಾಧನೆಯ ವಿಚಾರವನ್ನು ಪ್ರಸ್ತಾಪಿಸಲಾಗಿದೆ. "ಈ ಹಿಂದೆ ಹೇಳದಂತೆ ಯಾವ ಪ್ರಕಾರವಾಗಿ ಕ್ರಿಯೆಗಳು ಲಯವನ್ನು ಹೊಂದುವುವೋ, ಅದರಂತೆ ಯಾವ ಲಿಂಗದಲ್ಲಿ ಭಾವವೂ ಸಹ ಲೀನವಾಗುವುದೋ ಅಂದು 'ಭಾವಲಿಂಗ' (ಪ್ರಾಣಲಿಂಗ) ವೆಂದು ದೇಶೀಕರು (ವೀರಶೈವಾಚಾರ್ಯರು) ಸ್ಪಷ್ಟವಾಗಿ ಹೇಳುತ್ತಾರೆ. ಸಿ.ಶಿ. (15–37) ಭಗವಂತನಾದ (ಷಡ್ಗುಣೈಶ್ವರ್ಯ ಸಂಪನ್ನನಾದ) ಪರಮ ಶಿವನಾದ ದೇವನು ಭಾವದಿಂದಲೇ (ಸಂಪೂರ್ಣವಾದ ಶಿವಾತ್ಮಕ ವೃತ್ತಿಯಿಂದಲೇ) ಗ್ರಹಿಸಲ್ಪಡುತ್ತಾನೆ. "ಭಾವೋ ಮಾನಸ ಜೇಷ್ಟಾತ್ಮ ಪರಿಪೂರ್ಣಃ ಶಿವಾತ್ಮಕಃ "ಹೀಗೆ ನಿತ್ಯ ಪರಿಪೂರ್ಣನೆಂದು ಹೇಳಲ್ಪಟ್ಟ ಅವನಿಗೆ ಕೇವಲ ಕ್ರಿಯೆಗಳಿಂದ ಏನು ಪ್ರಯೋಜನ. ಸಿ.ಶಿ. (15–38) ಅಖಂಡನೂ (ಅಪರಿಚ್ಛೀನ್ನನೂ) ಪರಮಾನಂದ ಸ್ವರೂಪನೂ ಮತ್ತು ಬೋಧರೂಪನೂ (ಚಿದ್ರೂಪನೂ) ಆದ ಪರಶಿವನು ಭಾವದಿಂದ ಮಾಡಿದ ಭಕ್ತರ ಭಾವನಾತ್ಮಕವಾದ ಉಪಚಾರಗಳಿಂದ ಪ್ರಸನ್ನನಾಗುತ್ತಾನೆ. ಸಿ.ಶಿ. (15–39) ಮಣ್ಣು ಮತ್ತು ಶಿಲಾ ಮುಂತಾದ ಬಾಹ್ಯ ವಸ್ತುಗಳಿಂದ